# ಅಧ್ಯಾತ್ಮಪ್ರಕಾಶ

एतज्ज्ञेयं नित्यमेवाऽऽत्मसंस्थं नातः परं वेदितव्यं हि किञ्चित्

ಸಂಪುಟ ೪೯ ಅಕ್ಟೋಬರ್ ೧೯೭೯ ಸಂಚಿಕೆ ೨

## ವಿಷಯಗಳು

---




ಪತ್ರಿಕೆಯ ಚಂದ ವರ್ಷಕ್ಕೆ

ರೂ. ೮-೦೦

ಪೋಷಕರಿಗೆ ರೂ. ೧೨-೦೦

ಮಹಾಪೋಷಕರಿಗೆ ರೂ. ೧೦೧=

ಮತ್ತು ಮೇಲೆ





ಶತಮಾನೋತ್ಸವದ ಸುದ್ದಿಗಳಿಗೆ

ಮರೆಹಾಳೆಯ

೨ನೇ ಪುಟವನ್ನು ನೋಡಿರಿ.



ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ :

**ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,**

ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211


**October 1979** 

# ಕಾರ್ಯಾಲಯದ ಸುದ್ದಿ

**ಪತ್ರಿಕೆ :** ಚಂದಾದಾರರು ಹಾಗೂ ಮಹಾಪೋಷಕರುಗಳ ಸಂಖ್ಯೆಯು ಕಳೆದವರ್ಷಕ್ಕಿಂತ ಆಶಾದಾಯಕವಾಗಿದೆ. ಆದರೂ ಒಂದುಸಾವಿರವನ್ನು ಇನ್ನೂ ಮುಟ್ಟಿರುವದಿಲ್ಲ. ಮಹಾಜನರು ಈ ಕಡೆಗೆ ಲಕ್ಷ್ಯವಿಡಬೇಕಾಗಿ ಪ್ರಾರ್ಥನೆ.

**ಪುರಾಣ : ಉಪನ್ಯಾಸಗಳು :** ಭಾಗವತ ಮಹಾಪುರಾಣದಲ್ಲಿ ಆರನೆಯ ಸ್ಕಂಧ-ಹದಿನಾಲ್ಕು ಅಧ್ಯಾಯಗಳಾಗಿವೆ. ಭಾನುವಾರದ ಉಪನ್ಯಾಸಗಳು ಎಂದಿನಂತೆ ಮುಂದುವರಿದಿವೆ.

**ಶ್ರೀ ಶ್ರೀ ಶತಮಾನೋತ್ಸವ :** 1979ನೆಯ ಡಿಸೆಂಬರ್ ಮಾಹೆಯ ತಾರೀಖು 8 ಮತ್ತು 9ನೇ ಶನಿ-ಭಾನುವಾರಗಳಂದು ಶ್ರೀ ಶ್ರೀ ಶತಮಾನೋತ್ಸವದ ಕಾರ್ಯಕ್ರಮಗಳನ್ನು ನಿಶ್ಚಯಿಸಲಾಗಿದೆ. ಉತ್ಸವದ ಅಂಗವಾಗಿ ವಿಶೇಷಪೂಜಾ-ರುದ್ರಹೋಮಾದಿಗಳು, ಸಂಜೆ ವೇಳೆಯಲ್ಲಿ ವಿದ್ವದ್‌ಗೋಷ್ಠಿ, ಪ್ರವಚನಗಳು-ಮುಂತಾದ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುವದು. 9ನೇ ತಾರೀಖು ಭಾನುವಾರ ನೂತನ ಅಧ್ಯಾತ್ಮಗ್ರಂಥವೊಂದರ ಬಿಡುಗಡೆಯನ್ನು ಮಾಡಲಾಗುವದು. ಈ ಸಂದರ್ಭದಲ್ಲಿ ಡಿಸೆಂಬರ್ ಮಾಹೆಯ 'ಅಧ್ಯಾತ್ಮಪ್ರಕಾಶ' ಸಂಚಿಕೆಯನ್ನು "ವಿಶೇಷ ಸಂಚಿಕೆ"ಯಾಗಿ ಹೊರಡಿಸಲಾಗುವದು. ಇದನ್ನು ಪತ್ರಿಕೆಯ ಗ್ರಾಹಕರೆಲ್ಲರಿಗೂ ಮುಫತ್ತಾಗಿ ಕಳುಹಿಸಲಾಗುವದು. ಉಳಿದವರಿಗೆ ಯಥೋಚಿತವಾದ ಬೆಲೆಗೆ ನೀಡಲಾಗುವದು. ಪತ್ರಿಕೆಯ ವಿಶೇಷಸಂಚಿಕೆಗೆ "ಅಧ್ಯಾತ್ಮವಿದ್ಯೆಯ ಸಾಧನ ಸಿದ್ಧಾಂತಗಳು" ಅಥವಾ ಪ್ರಸ್ಥಾನತ್ರಯಭಾಷ್ಯಗಳ ಆಧಾರವುಳ್ಳ ಶಾಂಕರ ವೇದಾಂತದ ಮುಖ್ಯ ಪ್ರಮೇಯಗಳನ್ನು ಕುರಿತು ಬರೆದುಬರುವ ಲೇಖನಗಳನ್ನು ಸ್ವೀಕರಿಸಲಾಗುವದು. ಯೋಗ್ಯವಾಗಿ ಕಂಡ ಲೇಖನಗಳನ್ನು ಪ್ರಕಟಿಸಿ ಲೇಖಕರಿಗೆ ಪತ್ರಿಕೆಯ ಒಂದು ಪ್ರತಿಯನ್ನು ಕಳುಹಿಸಲಾಗುವದು. ಪತ್ರಿಕೆಗೆ ಲೇಖನಗಳನ್ನು ಕಳುಹಿಸುವವರು ಅಕ್ಟೋಬರ್ ಇಪ್ಪತ್ತನೆಯ ತಾರೀಖಿನೊಳಗಾಗಿ ಅಥವಾ ಆದಕ್ಕೂ ಮುಂಚೆ ತಲುಪುವಂತೆ ರವಾನಿಸಬೇಕು. ಲೇಖನಗಳು ಮುದ್ರಿತ ಡೆಮ್ಮಿ ನಾಲ್ಕು ಪುಟಗಳನ್ನು ಮೀರಿರಬಾರದು.

ಸಭೆಗಳಲ್ಲಿ ಭಾಗವನ್ನು ವಹಿಸುವ ವಿದ್ವಾಂಸರು ಹಾಗೂ ಇತರ ವಿವರಗಳನ್ನು ಹಿಂದಿನಿಂದ ಪ್ರಕಟಿಸಲಾಗುವದು. ವಿಶೇಷಸಂಚಿಕೆಯ ಪ್ರಕಟನೆಯೂ ಸೇರಿದಂತೆ ಈ ಮಹೋತ್ಸವಕ್ಕೆ ಸುಮಾರು ಎಂಟುಸಾವಿರರೂಪಾಯಿಗಳಿಗೆ ಮೇಲ್ಪಟ್ಟು ಖರ್ಚಾಗಬಹುದೆಂತ ಅಂದಾಜುಮಾಡಿದೆ. ಮಹಾಜನರು ಉದಾರವಾದ ಸಹಾಯವನ್ನು ನೀಡಿ ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ.

**ಗ್ರಂಥಮುದ್ರಣ :** " ಭಗವದ್ಗೀತಾಭಾಷ್ಯ " ೧೪೪ ಪುಟಗಳಾಗಿವೆ. "ಸಮ್ಯಗ್ದರ್ಶನ" ೧೨೦ ಪುಟಗಳಾಗಿವೆ. ಉಳಿದ ಮುದ್ರಣಕಾರ್ಯಗಳೂ ಮುಂದುವರಿಯುತ್ತಿವೆ.

**ಬೆಂಗಳೂರು ಶಾಖಾಕಾರ್ಯಾಲಯ :** ಕಾರ್ಯದರ್ಶಿಗಳಾದ ಶ್ರೀ|| ಕೆ.ಜಿ. ಸುಬ್ರಾಯಶರ್ಮರು 'ಉತ್ತರಭಾರತಪ್ರವಾಸ'ದಲ್ಲಿರುವದರಿಂದ ಹೆಚ್ಚಿನ ಸುದ್ದಿಗಳನ್ನು ಅವರು ಹಿಂದಿರುಗಿದ ಅನಂತರ ತಿಳಿಸಲಾಗುವದು.

---

# ಶ್ರದ್ಧಾಂಜಲಿ!!



ಅಧ್ಯಾತ್ಮಪ್ರಕಾಶಕಾರ್ಯಾಲಯದ ಬೆಂಗಳೂರುಶಾಖೆಯಲ್ಲಿ ನೆಲಸಿದ್ದ ಶ್ರೀಮತಿ ಮುತ್ತೂರು ಲಕ್ಷ್ಮೀದೇವಮ್ಮನವರು ತಾ॥ 10-9-79ನೇ ಸೋಮವಾರ ಸ್ವರ್ಗಸ್ಥರಾದರೆಂದು ತಿಳಿಸಲು ವಿಷಾದಿಸುತ್ತೇವೆ.

ಬ್ರಹ್ಮೀಭೂತ ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರಲ್ಲಿ ಸುಮಾರು ಇಪ್ಪತ್ತೆರಡು ವರ್ಷಗಳ ಕಾಲ ಅವಿಚ್ಛಿನ್ನವಾಗಿ ಸೇವೆಯನ್ನು ಸಲ್ಲಿಸಿ ಅನಂತರ ನಾಲ್ಕು ವರ್ಷಕಾಲ ಬೆಂಗಳೂರು ಕಾರ್ಯಾಲಯದಲ್ಲಿಯೇ ನೆಲಸಿದ್ದು ಭಕ್ತರೆಲ್ಲರಿಗೂ 'ಮಾತಾಜಿ' ಯವರಾಗಿದ್ದ ಶ್ರೀಮತಿಯವರ ಜೀವನವು ಒಂದು ದೊಡ್ಡ ತಪಸ್ಸಾಗಿತ್ತು. ತ್ಯಾಗ, ಪರೋಪಕಾರ, ನಿಸ್ಸ್ವಾರ್ಥಸೇವೆ, ಶಿಷ್ಟಾಚಾರ, ಅಧ್ಯಾತ್ಮಸಾಧನಗಳಿಗೆ ಹೆಸರಾಗಿದ್ದ ಶ್ರೀಮತಿಯವರು ಬೆಂಗಳೂರು ಕಾರ್ಯಾಲಯಕ್ಕೆ ಒಂದು ದಿಕ್ಕಾಗಿದ್ದರು. ಇಂಥ ಪೂಜ್ಯಮಾತೆಯವರ ನಿಧನವು ಸಂಸ್ಥೆಗೆ ತುಂಬಲಾರದ ನಷ್ಟವಾಗಿ ಪರಿಣಮಿಸಿದೆ.

ಶ್ರೀ ದಿಗ್ವಿಜಯರಾಮದೇವರು ಹಾಗೂ ಸದ್ಗುರುಗಳು ಮೃತರಿಗೆ ಸದ್ಗತಿಯನ್ನೂ ಆತ್ಮಶಾಂತಿಯನ್ನೂ ನೀಡಲೆಂದು ಹೃತ್ಪೂರ್ವಕವಾಗಿ ನಾವೆಲ್ಲರೂ ಪ್ರಾರ್ಥಿಸುವೆವು. ಶ್ರೀಮತಿಯವರ ಗುಣಗಾನವನ್ನು ಮಾಡುತ್ತಾ ನಮ್ಮ ಶ್ರದ್ಧಾಂಜಲಿಗಳನ್ನು ಈ ಮೂಲಕ ಅರ್ಪಿಸುತ್ತೇವೆ.

ಅಧ್ಯಾತ್ಮಪ್ರಕಾಶಕಾರ್ಯಾಲಯದ
ಟ್ರಸ್ಟಿಗಳು, ಕಾರ್ಯಕಾರಿಸಮಿತಿ ಸದಸ್ಯರುಗಳು,
ನೌಕರರು, ಹಾಗೂ ಭಕ್ತರು ಮತ್ತು ಅಭಿಮಾನಿಗಳು,
ಹೊಳೆನರಸೀಪುರ ಮತ್ತು ಬೆಂಗಳೂರು.

॥ ಓಂ ॥

# ಅಧ್ಯಾತ್ಮಪ್ರಕಾಶ

ಸಂಪುಟ ೪೯ ]   ವರ್ಷಕ್ಕೆ ರೂ. ೮-೦೦ ; ಬಿಡಿ ಸಂಚಿಕೆಗೆ : ೬೦ ಪೈಸೆ   [ ಸಂಚಿಕೆ ೨

ಅಕ್ಟೋಬರ್ 1979

( ಶ್ರೀ ಸಿದ್ಧಾರ್ಥಿಸಂವತ್ಸರದ ಆಶ್ವಯುಜ )

## ಸುಷುಪ್ತರೂಪವು ಪಾಪಪುಣ್ಯಗಳಿಲ್ಲದ್ದು

**ಅತ್ರ ಪಿತಾ ಅಪಿತಾ ಭವತಿ ಮಾತಾ ಅಮಾತಾ....ತಾಪಸೋ ಅತಾಪಸಃ ಅನನ್ವಾಗತಂ ಪುಣ್ಯೇನ .ಅನನ್ವಾಗತಂ ಪಾಪೇನ ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ ॥**

**—ಬೃಹದಾರಣ್ಯಕ. ೪-೩-೨೨**

**ಭಾವಾರ್ಥ :** ಇಲ್ಲಿ ತಂದೆಯು ತಂದೆಯಲ್ಲದವನಾಗುವನು. ತಾಯಿಯು ತಾಯಿಯಲ್ಲ ;....ತಾಪಸನು ತಾಪಸನಲ್ಲ, ಪುಣ್ಯದಿಂದಲಾಗಲಿ ಪಾಪದಿಂದಲಾಗಲೀ ಅನುಗತನಾಗಿರುವದಿಲ್ಲ ; ಏಕೆಂದರೆ ಅವನು ಆಗ ಹೃದಯದ ಶೋಕಗಳನ್ನೆಲ್ಲ ದಾಟಿರುವನು.

[ಅಸಂಗನಾದ ಆತ್ಮನು ಸುಷುಪ್ತಾವಸ್ಥೆಯಲ್ಲಿ ಅವಿದ್ಯಾಕಾಮಕರ್ಮರಹಿತನಾಗಿದ್ದು ತನ್ನ ಸ್ವಾಭಾವಿಕಸ್ವರೂಪದಲ್ಲಿದ್ದುಕೊಂಡಿರುವನಾದ್ದರಿಂದ ಮಾತಾಪಿತ್ರಾದಿ ಲೋಕಸಂಬಂಧದಿಂದಲೂ ಪಾಪಪುಣ್ಯಧರ್ಮಾಧರ್ಮಗಳೆಂಬ ಕಾರ್ಯಕರಣಸಂಬಂಧಗಳಿಂದಲೂ ಬಿಡುಗಡೆಯನ್ನು ಹೊಂದಿ ಶೋಕಗಳನ್ನೆಲ್ಲ ದಾಟಿ ಆನಂದಸ್ವರೂಪನಾಗಿರುವನು– ಎಂದಭಿಪ್ರಾಯ.]

———

# ಅಧ್ಯಾತ್ಮಸಂದೇಶ

( ಗುರುಕಿಂಕರ )

## ಸುಷುಪ್ತರೂಪವು ಕಾಮಕರ್ಮನಿರ್ಮುಕ್ತವಾಗಿದೆ

ಹಿಂದಿನ ಸಂದೇಶದಲ್ಲಿ ತಿಳಿಸಿರುವಂತೆ ಸುಷುಪ್ತಿಯನ್ನು ಈಗ ಮತ್ತೊಮ್ಮೆ ಶ್ರೌತದೃಷ್ಟಿಯಿಂದ ವಿಚಾರಮಾಡಲಾಗುತ್ತದೆ. ಇಲ್ಲಿ ಅನುಭವವು ಸುಷುಪ್ತಿಯು ದಾಗಿಯೂ ವಿಚಾರಸರಣಿಯು ಎಚ್ಚರಕ್ಕೆ ಸೇರಿದ್ದಾಗಿಯೂ ಇರುವದರಿಂದ ವಾಚಕರು ಈ ವಿಚಾರಸರಣಿಯನ್ನು ನೆಪಮಾಡಿಕೊಂಡು ಅನುಭವದಲ್ಲಿ ನಿಂತೇ ತಮ್ಮ ಆತ್ಮ ಸ್ವರೂಪವನ್ನು ಪರೀಕ್ಷಿಸಿಕೊಳ್ಳಬೇಕು. ಈ ಸಂದರ್ಭದಲ್ಲಿ ಶ್ರುತಿ, ಆಚಾರ್ಯರಾದಿ ಯಾಗಿ ಯಾರ ಸಹಾಯವೂ ದೊರಕುವಂತಿಲ್ಲ. ತಾನೇ ತನ್ನನ್ನೇ ತನ್ನೊಳಗೇ ಕಂಡು ಕೊಂಡಾಗ ಏನು ತತ್ತ್ವವು ಅನುಭವದಲ್ಲಿ ನಿಲ್ಲುವದೋ ಅದೇ ಆತ್ಮನ ನಿಜ ಸ್ವರೂಪವು. ಆದ್ದರಿಂದ ಈಗ ಶ್ರುತಿಯ ಹೇಳಿಕೆಯನ್ನು ಮತ್ತೆ ಆಲೈಸೋಣ. ನಮ್ಮನ್ನು ಆತ್ಮಸ್ವರೂಪದ ಕಡೆಗೆ ಒಯ್ಯುವ ಮಟ್ಟಿಗೆ ಅದು ಸಹಾಯಕವಾಗಿದೆ.

ಲೋಕದಲ್ಲಿ ನಮಗೆ ಪ್ರಸಿದ್ಧವಾಗಿರುವ ಅನುಭವದಂತೆ 'ನಾನು' ಎಂದರೆ 'ಒಬ್ಬ ಮನುಷ್ಯನು ; ಗಂಡಸು ಅಥವಾ ಹೆಂಗಸು ; ಇಷ್ಟು ವಯಸ್ಸಿನವನು ; ಇಂಥ ಜಾತಿಯವನು ; ನಮ್ಮ ತಂದೆತಾಯಿಗಳು ಇಂಥವರು, ನಾನು ಇಂಥ ಉದ್ಯೋಗಿ ; ಗೃಹಸ್ಥ ಅಥವಾ ಸಂನ್ಯಾಸಿ ; ನಮ್ಮ ಬಂಧುಗಳು ಇಂಥವರು, ನನ್ನ ವಿದ್ಯಾಭ್ಯಾಸ ಇಂಥದ್ದು, ನಾನು ಪಂಡಿತ ; ಅಥವಾ ಅನಕ್ಷರಸ್ಥ ; ನಾನು ಪುಣ್ಯಶಾಲಿ, ಅಥವಾ ಪಾಪಿ ; ನಾನು ನಾಗರಿಕ, ಅಥವಾ ಅಲೆಮಾರಿ, ನಾನು ನಿರಪರಾಧಿ, ಅಥವಾ ಅಪರಾಧಿ-ಇತ್ಯಾದಿ ಭಾವನೆಗಳು ಪ್ರತಿಯೊಬ್ಬನಿಗೂ ಭದ್ರವಾಗಿ ಅಂಟಿಕೊಂಡಿರು ವವು. ಇವುಗಳಿಂದ ನಮ್ಮ ಸ್ವರೂಪವನ್ನು ಕೊಡವಿಕೊಳ್ಳುವದೇ ಸಾಧ್ಯವಿಲ್ಲ ವಾಗಿದೆ. ಇಡಿಯ ಜಗತ್ತಿನಲ್ಲಿ ದೇವತೆಗಳಿಂದ ಹಿಡಿದು ಎಲ್ಲಾ ಜೀವಿಗಳೂ ಅದರಲ್ಲಿಯೂ ಮುಖ್ಯವಾಗಿ- ಮನುಷ್ಯರಾದ ನಾವು ಯಾವ ದೇಶದವರಾಗಿರಲಿ, ಎಲ್ಲಿಯೇ ಇರಲಿ, ಏನೇ ಮಾಡುತ್ತಿರಲಿ, ಈ ಭಾವನೆಗಳಿಗೆ ಸಂಪೂರ್ಣವಾಗಿ ಬದ್ಧ ರಾಗಿರುತ್ತೇವೆ. ಕೆಲವು ಧರ್ಮಗ್ರಂಥಗಳೂ ಧರ್ಮೋಪದೇಶಕರೂ ಕೂಡ ಈ ಭಾವನೆ ಗಳನ್ನೇ ಭದ್ರಗೊಳಿಸುತ್ತಿರುವರು. ನಮ್ಮ ವೇದಗಳೂ ಕೂಡ ವರ್ಣ-ಆಶ್ರಮ- ವಯಸ್ಸು ಸ್ಥಿತಿಗತಿಗಳನ್ನು ಆಶ್ರಯಿಸಿ ವಿಧಿನಿಷೇಧರೂಪವಾದ ಕರ್ಮಗಳನ್ನೂ ನಮಗೆ ವಿಧಿಸುತ್ತಿವೆ. ಭಗವದ್ಗೀತೆಯಲ್ಲಿಯೂ 'ಕರ್ಮವನ್ನೇ ಮಾಡು' ಎಂದು ಒಂದು ಕಡೆ ಹೇಳಿದೆ. ಬಹಳ ಕಾಲದಿಂದ-ಎಂದರೆ ಪ್ರಪಂಚವು ಹುಟ್ಟಿದಾಗಿನಿಂದಲೂ ತಿರುಗುತ್ತಿರುವ ಕರ್ಮಚಕ್ರವು ಎಲ್ಲಾ ಜೀವರಾಶಿಗಳನ್ನೂ ತನ್ನೊಳಗೆ ಅಡಗಿಸಿ ಕೊಂಡು ಜನನ-ಮರಣ, ಸೃಷ್ಟಿ-ಪ್ರಲಯಗಳಲ್ಲಿ ನೂಕಿ ತನ್ನ ಸರ್ವಾಧಿಕಾರವನ್ನು ಯಾವಾಗಲೂ ಚಲಾಯಿಸುತ್ತಿರುವದು. ಇಂಥ ಸಂದರ್ಭದಲ್ಲಿ ಉಪನಿಷತ್ತಿನ ಈ

ಉಪದೇಶವನ್ನು ನಾವು ಮೊದಲಬಾರಿಗೆ ಕೇಳಿದರೆ 'ಇದು ಸುಳ್ಳೇ'-ಎನಿಸುವದರಲ್ಲಿ ಆಶ್ಚರ್ಯವಿಲ್ಲ. ಆದರೆ ಈ ಉಪದೇಶವನ್ನು ಮತ್ತೆ ಮತ್ತೆ ಆಲೈಸಿ ಕೇಳಿದಾಗ ಇದು ನಿಜವಾದರೆ ಎಷ್ಟು ಚೆನ್ನಾಗಿದ್ದೀತು, ಎನಿಸುತ್ತದೆಯಲ್ಲವೆ? ಆದ್ದರಿಂದಲೇ ಶ್ರುತಿಯು ನಮ್ಮ ಆತ್ಮಸ್ವರೂಪವನ್ನು ಕುರಿತು ಮತ್ತೆ ಮತ್ತೆ ವರ್ಣಿಸಿ ನಮ್ಮ ಅನುಭವಗೋಚರವಾಗುವಂತೆ ಮಾಡುತ್ತಿದೆ. ಹೇಗೆಂದರೆ: ನಾವು ಗಾಢನಿದ್ರೆಯ ಅನುಭವಸ್ವರೂಪದಲ್ಲಿದ್ದಾಗ ಹೇಗಿರುತ್ತೇವೆ? ಎಂಬಿದನ್ನು ನೋಡೋಣ. ಆಗ ನಮಗೇಕೆ ಏನೂ ನೆನಪಿರುವದಿಲ್ಲ? ಎಂಬಿದೊಂದು ಜಟಿಲವಾದ ಪ್ರಶ್ನೆ. ಎಚ್ಚರ ಕನಸುಗಳಲ್ಲಿ ಗಂಟೆಗಟ್ಟಲೆ ಕಾಲವೆಲ್ಲ 'ನಾನು' ಎಂಬ ಜೀವಾತ್ಮಸ್ವರೂಪದ ಅನುಸಂಧಾನವನ್ನು ನಿರಂತರವಾಗಿ ಹೊಂದಿದ್ದ ನಮಗೆ ಸುಷುಪ್ತಿಯಲ್ಲೇಕೆ ಅದರ ಅರಿವು ಇರುವದಿಲ್ಲ? ಪ್ರತಿದಿನವೂ ಸುಷುಪ್ತಿಯಾಗುತ್ತಿದ್ದರೂ ಒಮ್ಮೆಯಾದರೂ ನಾವು ನಮ್ಮ ಸಂಸಾರಿ ಸ್ವರೂಪವನ್ನು ಗಾಢನಿದ್ರೆಯಲ್ಲೇಕೆ ಕಾಣುತ್ತಿಲ್ಲ? ಅದೂ ನಮ್ಮ ಅನುಭವಕ್ಕೆ ಸೇರಿದೆಯಲ್ಲ? ಎಂಬಿದನ್ನು ಪರಿಶೀಲಿಸಿದರೆ 'ನಾನು' ಎಂಬ ಸ್ವರೂಪಕ್ಕೆ ಸೇರದೆ ಇರುವ ಈ ಸಂಸಾರಿತ್ವವು ಎಚ್ಚರಕನಸುಗಳಲ್ಲಿ ಮಾತ್ರ ತೋರಿ ಮರೆಯಾಗಿದೆ; ಇದು ನಿಜವಲ್ಲ'-ಎಂದೇ ನಾವು ತೀರ್ಮಾನಿಸಬೇಕಾಗಿದೆ. ಇದನ್ನೇ ಶ್ರುತಿಯೂ ಸಮರ್ಥಿಸಿ ಹೀಗೆ ಹೇಳುತ್ತಿದೆ: "ಇಲ್ಲಿ ತಂದೆಯು ತಂದೆಯಾಗಿರುವದಿಲ್ಲ...." ಇತ್ಯಾದಿ.

ಈಗ ಶ್ರುತಿವಾಕ್ಯವನ್ನು ಸ್ವಲ್ಪ ಮೆಲುಕುಹಾಕೋಣ. ಲೋಕದಲ್ಲಿ ಪ್ರತಿಯೊಬ್ಬ ಮಾನವನೂ ತನ್ನ ತಂದೆತಾಯಿಗಳಿಂದ ಜನ್ಮವನ್ನು ಪಡೆಯುತ್ತಾನೆ. ಆದ್ದರಿಂದ ಯಾರನ್ನು ಮರೆತರೂ ಯಾವನೂ ಮಾತಾಪಿತೃಗಳನ್ನು ಮರೆಯುವಂತಿಲ್ಲ. ಅನಂತರ ತಾನು ವಾಸಿಸುವ ಸ್ಥಳ, ಊರು-ಮುಂತಾದವು. ಹಾಗೆಯೇ ಮುಂದುವರಿದರೆ ತನ್ನ ಬಾಲ್ಯ, ಆಗ್ಗೆ ಅಭ್ಯಾಸಮಾಡಿದ ವೈದಿಕ ಲೌಕಿಕ ವಿದ್ಯೆಗಳು, ಗುರುಗಳು, ಸ್ನೇಹಿತರು, ಅನಂತರ ತನ್ನ ಉದ್ಯೋಗ, ಜೀವನ, ತಾನು ಮಾಡಿರುವ ಹಾಗೂ ಮಾಡುತ್ತಿರುವ ಕರ್ಮಗಳು-ಇತ್ಯಾದಿ. ಆದರೆ ಇವುಗಳಾವುವೂ ಗಾಢನಿದ್ರೆಯಲ್ಲಿ ತೋರುವದೇ ಇಲ್ಲ. ತಂದೆ ಎಂಬವನಾಗಲಿ ತಾಯಿ ಎಂಬವಳಾಗಲಿ ಆಗ ನೆನಪೇ ಆಗುವದಿಲ್ಲ. ತನ್ನ 'ಸ್ವಂತ'ವೆಂದು ಭಾವಿಸಿಕೊಂಡಿದ್ದ ಮೇಲಿನ ವಿವರಗಳೂ ಆಗ್ಗೆ ಸೊನ್ನೆಯೇ ಆಗಿರುವವು. ಅಂಜಿಕೆ, ಧೈರ್ಯ, ಔದಾರ್ಯ-ಕಾರ್ಪಣ್ಯಾದಿಗಳು, ಕಾಮಕ್ರೋಧಗಳು- ಹೀಗೆ ಯಾವ ಮಾನಸಿಕವ್ಯಥೆಗಳೂ ಅಲ್ಲಿ ಕಂಡುಬರುವದಿಲ್ಲ. ಬಡವ-ಬಲ್ಲಿದನೆಂಬ ಅಥವಾ ವಿದ್ಯಾವಂತ-ಅವಿದ್ಯಾವಂತನೆಂಬುದಾಗಲಿ, ಉದ್ಯೋಗಿ-ನಿರುದ್ಯೋಗಿಯೆಂಬುದಾಗಲಿ ಅಲ್ಲಿ ನೆನಪಿರುವದಿಲ್ಲ. ಹೀಗೆಯೇ ವಿವರಿಸುತ್ತಾ ಹೋದಂತೆಲ್ಲ ಶಬ್ದಗಳು ವ್ಯರ್ಥವಾಗುವವೇ ಹೊರತು ಒಟ್ಟನಲ್ಲಿ ಸುಷುಪ್ತಿಯಲ್ಲಿ ಯಾವ ಬಯಕೆಗಳಾಗಲಿ ಯಾವ ಕರ್ಮಗಳಾಗಲಿ ಒಂದೂ ಇರುವದಿಲ್ಲ. ಇದರಿಂದ ಸಿದ್ಧವಾಗುವದೇನೆಂದರೆ: ಸುಷುಪ್ತಿಯಲ್ಲಿ ನಮ್ಮ ಸ್ವರೂಪವು ಈಗ ಎಚ್ಚರ

ದಲ್ಲಿ ನಾವು ಭಾವಿಸಿಕೊಂಡಿರುವ ಯಾವ ಉಪಾಧಿವಿಶೇಷಗಳಿಂದಲಾಗಲೀ ಆ ನಿಮಿತ್ತವಾದ ಕ್ರಿಯಾಕಾರಕಫಲಗಳಿಂದಾಗಲಿ ಎಂದಿಗೂ ಅಂಟಿಕೊಳ್ಳದೆ ಅಸಂಗ ವಾಗಿಯೇ ಇರುವದು-ಎಂಬಿದು ದೃಢವಾಗುತ್ತದೆ.

ಹೀಗೆ ಕಾಮುಕರ್ಮಗಳಿಂದ ಬಿಡುಗಡೆಯನ್ನು ಹೊಂದಿರುವ ಸ್ವರೂಪವು ಸುಷುಪ್ತಿಯಲ್ಲಿ ನಮಗೆ ಅನುಭವಕ್ಕೆ ಬರುವದರಿಂದ ನಾವು ಅಸಂಸಾರಿಗಳೆಂಬುದೇ ಪರಮಾರ್ಥವು-ಎಂಬಿದು ತರ್ಕದಿಂದ ಸಿದ್ಧವಾದಂತೆ ನಮಗೆ ಅನಿಸುವದು. ಏಕೆಂದರೆ ಎಚ್ಚರದ ವಾಸನೆಯು ಇನ್ನೂ ಸಂಪೂರ್ಣವಾಗಿ ನಮಗೆ ತೊಲಗಿರುವದಿಲ್ಲ. ಈ ಸಂದರ್ಭದಲ್ಲಿಯೇ ಒಂದು ಪ್ರಶ್ನೆಯು ಏಳುತ್ತದೆ. ಏನೆಂದರೆ : ಜೀವನದಲ್ಲಿ ನಾವು ಸುಷುಪ್ತಿಯನ್ನು ಅನುಭವಿಸುವದು ಕೇವಲ ಕೆಲವು ಗಂಟೆಗಳು ಮಾತ್ರ. ಉಳಿದ ಎಲ್ಲಾ ಕಾಲದಲ್ಲಿಯೂ ಪ್ರಪಂಚವು ತೋರಿಕೊಂಡಿದ್ದು ಅದರ ಪೂರ್ಣವಾದ ಪ್ರಭಾವವು ನಮ್ಮ ಮೇಲೆ ಇದ್ದುಕೊಂಡೇ ಇರುತ್ತದೆ. ಶ್ರುತಿಯು ನಾವು ಅಸಂಸಾರಿ ಸ್ವರೂಪರೆಂದು ಎಷ್ಟೇ ಹೇಳಿದರೂ ಎಚ್ಚರದಲ್ಲಿ ನಾವು ಅನುಭವಿಸುತ್ತಿರುವ ಸಂಸಾರದ ಅನುಭವಬಲದಿಂದ ನಮ್ಮ ಸ್ವರೂಪವು ಸಂಸಾರಯುಕ್ತವಾದದ್ದೆಂದೇ ನಮಗೆ ದೃಢ ವಾಗಿ ಕಂಡುಬರುತ್ತದೆ. ಆದ್ದರಿಂದ ಪ್ರತ್ಯಕ್ಷವಿರುದ್ಧವಾಗಿ ಶ್ರುತಿಯು ಹೇಳುವದ ರಿಂದ ಅಸಂಸಾರಿತ್ವವೇ ಸುಳ್ಳೆಂದು ಏಕಾಗಬಾರದು? ಸುಷುಪ್ತಿಯಲ್ಲಿ ಸಂಸಾರಿತ್ವವು ತೋರದೆ ಇದ್ದಮಾತ್ರಕ್ಕೆ ನಮಗೆ ಅದು ಸಂಬಂಧಪಟ್ಟೇ ಇಲ್ಲವೆಂದು ಹೇಳುವದು ಹೇಗೆ ಸರಿಯಾದೀತು? ಈ ಸಂಶಯಕ್ಕೆ ಉತ್ತರವನ್ನು ಹಿಂದೆ ಸೂಕ್ಷ್ಮವಾಗಿ ಹೇಳಿದೆ ಯಾದರೂ ಈಗಲೂ ತಿಳಿಸೋಣ. ಹಿಂದೆ ಎಚ್ಚರ-ಕನಸುಗಳನ್ನು ಮಾತ್ರವೇ ಪರೀಕ್ಷಿಸುವ ಸಮಯದಲ್ಲಿ ಒಂದಕ್ಕೊಂದನ್ನು ಹೋಲಿಸಿದಾಗ ಎರಡರಲ್ಲಿಯೂ ಬೇರೆ ಬೇರೆಯಾಗಿಯೇ ಕಂಡುಬಂದಿದ್ದ ದ್ವೈತವು ಯಾವದೊಂದು ಅವಸ್ಥೆಯಲ್ಲೂ ಅನುಗತ ವಾಗಿರದೆ ವ್ಯಭಿಚರಿತವಾಗಿದ್ದುದನ್ನು ತಿಳಿಸಿದ್ದಾಗಿದೆ. ಎಂದರೆ ಎಚ್ಚರದ ಸಂಸಾರವು ಕನಸಿನಲ್ಲೇ ಗೈರುಹಾಜರಾದದ್ದೂ ಕನಸು ಆ ಕಾಲಕ್ಕೆ ತಾನೇ ಎಚ್ಚರವೆಂತ ತೋರಿದ್ದೂ ನಮಗೆ ತಿಳಿದಿದೆ. ಆದ್ದರಿಂದಲೇ ಅವು ಆತ್ಮನಿಗೆ ಅಂಟಿರಲಿಲ್ಲವೆಂದು ಹೇಳಿತ್ತು. ಹೀಗಿರುವಲ್ಲಿ ಸುಷುಪ್ತಿಯಲ್ಲಿ ಸಂಪೂರ್ಣವಾಗಿ ಕಾಣೆಯಾಗಿಬಿಟ್ಟ ಸಂಸಾರಿತ್ವವನ್ನು ಆತ್ಮನಿಗೆ ಧರ್ಮವೆಂದು ಹೇಳುವದರಲ್ಲಿ ನ್ಯಾಯವಾದರೂ ಏನಿದ್ದೀತು? ಇದಕ್ಕೆ ಬದಲು ಮೂರು ಅವಸ್ಥೆಗಳಲ್ಲಿಯೂ ಎಂದೆಂದಿಗೂ ವ್ಯಭಿಚರಿತ ವಾಗದೇ ತಾನೊಂದೇ ಇದ್ದುಕೊಂಡು ತನ್ನ ಬೆಳಕಿನಿಂದಲೇ ಉಳಿದ ದ್ವೈತವನ್ನೂ ಬೆಳಗುತ್ತಿರುವ ಆತ್ಮಸ್ವರೂಪವು ಯಾವಾಗಲೂ ಅಸಂಸಾರಿಯಾಗಿಯೇ ಇದೆ-ಎಂದು ಹೇಳುವದೇ ಯುಕ್ತ. ಅಂತೂ ಸುಷುಪ್ತಿಯ ಸ್ವರೂಪವನ್ನು ಮನಗಂಡಾಗ ಆತ್ಮನು ಸರ್ವಸಂಸಾರಧರ್ಮಾತೀತನೆಂಬುದು ನಿರ್ವಿವಾದವಾಗಿ ಸಿದ್ಧವಾಗುತ್ತದೆ.

ಈಗ ಮುಂದುವರೆದು 'ಎಲ್ಲಾ ಶೋಕಗಳನ್ನೂ ಆಗ ದಾಟಿರುತ್ತಾನೆ' ಎಂಬ ವಿಷಯವನ್ನು ವಿಚಾರಮಾಡೋಣ. ಕಾಮ, ಭಯ, ಶೋಕ, ಮೋಹ-ಇವು ಗಳೆಲ್ಲವೂ ಅಂತಃಕರಣವೃತ್ತಿಗಳೆಂಬುದು ಪ್ರಸಿದ್ಧವು. ಮನುಷ್ಯನು ಅಂತಃಕರಣ

ವಿಲ್ಲದೆ ಇವುಗಳನ್ನು ಅನುಭವಿಸಲಾರನು. ಆದರೆ ಸುಷುಪ್ತಿಯಲ್ಲಿ ಈ ಅಂತಃಕರಣವೂ ಇಲ್ಲವಾಗಿಬಿಟ್ಟಿರುವದರಿಂದ ಶೋಕಾದಿಗಳಿಗೆ ಅವಕಾಶವೇ ಅಲ್ಲಿರುವದಿಲ್ಲ. ಇದರಿಂದ ಸಿದ್ಧವಾಗುವದೇನೆಂದರೆ : ನಮ್ಮ ಸ್ವರೂಪವು ಶೋಕಮೋಹಾತೀತವಾಗಿದೆ. ಆದರೆ ಎಚ್ಚರಕನಸುಗಳಲ್ಲಿ ಮಾತ್ರ ಬುದ್ಧ್ಯುಪಾಧಿಸಂಬಂಧದಿಂದ ಶೋಕಮೋಹಗಳಿಂದ ಕೂಡಿರುವಂತೆ ಕಂಡುಬರುತ್ತದೆ. ಇದನ್ನೇ ಹಿಂದೆ ಶ್ರುತಿಯಲ್ಲಿ 'ಧ್ಯಾಯತೀವ' ಎಂದು ತಿಳಿಸಲಾಗಿದೆ. ಆದ್ದರಿಂದ ಕಾಮ-ಭಯ-ಕ್ರೋಧಾದಿ ವೃತ್ತಿಗಳೆಲ್ಲವೂ ಅಂತಃಕರಣಕ್ಕೆ ಸೇರಿದವುಗಳೇ ; ಆತ್ಮನಿಗೆ ಸೇರಿದವುಗಳಲ್ಲ. ಆತ್ಮನಿಗೇ ಸೇರಿದವುಗಳಾಗಿದ್ದರೆ ಸುಷುಪ್ತಿಯಲ್ಲಿಯೂ ಅವು ಆತ್ಮನೊಡನೆ ತೋರಬೇಕಾಗಿತ್ತು. ಏಕೆಂದರೆ ಯಾವದೇ ವಸ್ತುವೂ ತನ್ನ ಸ್ವಭಾವವನ್ನು ಬದಲಾಯಿಸಲಾರದು. ಕನಸಿನ ಬೆಂಕಿಯೂ ಬಿಸಿಯಾಗಿಯೇ ಇರುತ್ತದೆಯಲ್ಲವೆ ? ಏಕೆಂದರೆ ಬಿಸಿಯು ಅದರ ಸ್ವರೂಪವಾಗಿರುತ್ತದೆ. ಹಾಗೆಯೇ ಕಾಮಾದಿಗಳೂ ಆತ್ಮಸ್ವರೂಪಕ್ಕೇ ಸೇರಿದವಾಗಿದ್ದರೆ ಸುಷುಪ್ತಿಯಲ್ಲಿಯೂ ತೋರಬೇಕಾಗಿತ್ತು. ಆದರೆ ಹಾಗೆ ತೋರದೆ ಇರುವದರಿಂದ ಅವು ಆತ್ಮಸ್ವಭಾವಕ್ಕೆ ಸೇರಿದವುಗಳಲ್ಲ- ಎಂದು ತೀರ್ಮಾನವಾಗುತ್ತದೆ.

ಆದರೆ ವೈಶೇಷಿಕರು, ಭರ್ತೃಪ್ರಪಂಚರೇ ಮೊದಲಾದ ವಾದಿಗಳು ಕಾಮಾದಿಗಳು ಆತ್ಮಾಶ್ರಿತವೆಂದು ಹೇಳುತ್ತಾರೆ. ಬುದ್ಧಿಸುಖದುಃಖಾದಿ ಎಂಟು ಗುಣಗಳನ್ನು ಆತ್ಮಗುಣಗಳೆಂದು ವೈಶೇಷಿಕರು ಹೇಳುತ್ತಾರೆ. 'ಆತ್ಮಕಾಮಃ' ಎಂಬ ಮಾತು ಕಾಮಗಳು ಆತ್ಮಾಶ್ರಿತವೆಂಬುದಕ್ಕೆ ಗಮಕವೆಂದೂ ಭರ್ತೃಪ್ರಪಂಚರು ಹೇಳುವರು. ಆದರೆ ಇವುಗಳು ಸರಿಯಾದ ತೀರ್ಮಾನಗಳಲ್ಲವೆಂದು ಆಚಾರ್ಯರು ತಳ್ಳಿಹಾಕಿರುತ್ತಾರೆ. ಶ್ರುತಿಯಲ್ಲಿ ಸ್ಪಷ್ಟವಾಗಿ 'ಕಾಮಾ ಯೇಽಸ್ಯ ಹೃದಿ ಶ್ರಿತಾಃ' ಎಂದು ಕಾಮಗಳು ಹೃದಯವನ್ನಾಶ್ರಯಿಸಿರುವವೆಂದೇ ಇದೆ. ಮತ್ತು ಕನಸಿನಲ್ಲಿ ಕಾಮವೇ ಮುಂತಾದವುಗಳಿರುವದು ನಿಜವಾದರೂ ಅವುಗಳನ್ನು ಬೆಳಗುವ ಸ್ವಯಂಜ್ಯೋತಿಯಾದ ಆತ್ಮನಿಲ್ಲದಿದ್ದರೆ ಅವು ಸಿದ್ಧವೇ ಆಗುತ್ತಿರಲಿಲ್ಲ. ದೃಗ್ರೂಪನಾದ ಆತ್ಮನಿಗೆ ವಿಷಯಗಳಾಗಿ ತೋರಿದ ಈ ಕಾಮಾದಿಗಳು ದೃಶ್ಯಗಳಾಗಿದ್ದುಕೊಂಡಿರುವಾಗ ಆತ್ಮನಲ್ಲಿ ಇವು ಹೇಗೆ ತಾನೆ ಇರಲು ಸಾಧ್ಯ ? ಆದ್ದರಿಂದ ವೈಶೇಷಿಕರ ತರ್ಕಾಭಾಸಗಳನ್ನು ನಂಬಬಾರದು. ಆತ್ಮನು ಸ್ವಯಂಜ್ಯೋತಿಯಾಗಿದ್ದಾನೆ-ಎಂದು ಹೇಳುವ ಶ್ರುತಿಯು ನ್ಯಾಯೋಪಬೃಂಹಿತವಾಗಿರುವದರಿಂದಲೂ ದೃಶ್ಯಗಳನ್ನು ತಾನೊಬ್ಬನೇ ಕನಸಿನಲ್ಲಿ ಬೆಳಗಿದ ಆತ್ಮನು ಸ್ವಯಂಜ್ಯೋತಿಯಾಗಿದ್ದಾನೆಂದು ಸಿದ್ಧಮಾಡಿರುವದರಿಂದಲೂ ಉಳಿದ ವಾದಿಗಳ ಮತಗಳೆಲ್ಲವೂ ಆಭಾಸಮಾತ್ರವಾಗಿರುವವು-ಎಂದೇ ಆಚಾರ್ಯರು ತಿಳಿಸಿದ್ದಾರೆ. ಆದ್ದರಿಂದ ಸುಷುಪ್ತರೂಪವು ಕಾಮಕರ್ಮನಿರ್ಮುಕ್ತವೆಂಬುದು ಸಿದ್ಧವಾಯಿತು. ಇನ್ನು ಸುಷುಪ್ತಿಯಲ್ಲಿ ಏನನ್ನೂ ಕಾಣದಿರುವದರ ಗುಟ್ಟೇನು ? ಎಂಬಿದನ್ನು ಮುಂದಿನ ಸಂದೇಶದಲ್ಲಿ ವಿವರಿಸಲಾಗುವದು.

———

# ಸಾಮಾನ್ಯನೀತಿ

( ಸುಭಾಷಿತರತ್ನಭಾಂಡಾಗಾರದಿಂದ )

**ಅಕೃತ್ವಾ ಪೌರುಷಂ ಯಾ ಶ್ರೀರ್ವಿಕಾಸಿನ್ಯಪಿ ಕಿಂ ತಯಾ ।**
**ಜರದ್ಗವೋಽಪಿ ಚಾಶ್ನಾತಿ ದೈವಾದುಪಗತಂ ತೃಣಮ್ ॥ ೧ ॥**

೧. ಪುರುಷಪ್ರಯತ್ನವಿಲ್ಲದೆ ಒದಗಿದ ಯಾವ ಸಿರಿಯುಂಟೋ ಅದು ವೃದ್ಧಿ ಹೊಂದಿದರೂ ಹೆಚ್ಚುಗಾರಿಕೆಯೇನಿದ್ದೀತು ? ಮುದಿ ಎತ್ತೂ ಸಹ ಅದೃಷ್ಟವು ಒದಗಿಸಿದ ಹುಲ್ಲನ್ನು ತಿಂದೇ ಜೀವಿಸುತ್ತದೆ. (ಲಾಟರಿಹಣ, ಬಡ್ಡಿದುಡ್ಡುಗಳು ನಿಜವಾದ ಸಂಪಾದನೆಯಲ್ಲ-ಎಂದರ್ಥ.)

**ದೀಪೋ ಭಕ್ಷಯತೇ ಧ್ವಾಂತಂ ಕಜ್ಜಲಂ ಚ ಪ್ರಸೂಯತೇ ।**
**ಯದನ್ನಂ ಭಕ್ಷಯೇನ್ನಿತ್ಯಂ ಜಾಯತೇ ತಾದೃಶೀ ಪ್ರಜಾ ॥ ೨ ॥**

೨. ದೀಪವು ಕತ್ತಲೆಯನ್ನು ನುಂಗುತ್ತದೆ. ಅದಕ್ಕೆ ತಕ್ಕಂತೆ ಕಿಟ್ಟ(ಕಪ್ಪು) ವನ್ನು ಹಡೆಯುತ್ತದೆ. ಎಂಥ ಅನ್ನವನ್ನು ನಾವು ತಿನ್ನುತ್ತೇವೋ ಅಂಥ ಮಕ್ಕಳೇ ಹುಟ್ಟುವವು.

**ಮೌನಂ ಕಾಲವಿಲಂಬಶ್ಚ ಪ್ರಯಾಣಂ ಭೂಮಿದರ್ಶನಮ್ ।**
**ಭ್ರುಕುಟ್ಯನ್ಯಮುಖೀ ವಾರ್ತಾ ನಕಾರಃ ಷಡ್ವಿಧಃ ಸ್ಮೃತಃ ॥ ೩ ॥**

೩. ಸುಮ್ಮನಿರುವದು, ಬೇಕೆಂದೇ ತಡಮಾಡುವದು, ಜಾಗವನ್ನು ಬಿಟ್ಟು ತೆರಳುವದು, ನೆಲವನ್ನೇ ನೋಡುತ್ತಾ ತಲೆತಗ್ಗಿಸಿಕೊಂಡಿರುವದು, ಹುಬ್ಬುಗಂಟು ಹಾಕುವದು, ಬೇರೆ ಮಾತಿನಲ್ಲಿ ತೊಡಗುವದು-ಇವು ಆರೂ 'ಇಲ್ಲ' ಎಂಬಿದರ ರೂಪಾಂತರಗಳು.

**ಅಕ್ಷರಾಣಿ ಪರೀಕ್ಷ್ಯಂತಾಮಂಬರಾಡಂಬರೇಣ ಕಿಮ್ ।**
**ಶಂಭುರಂಬರಹೀನೋಽಪಿ ಸರ್ವಜ್ಞಃ ಕಿಂ ನ ವೇತ್ತ್ಯಸೌ ॥ ೪ ॥**

೪. ನಿಜವಾದ ವಿದ್ಯೆಯೇನಿದೆ ? ಎಂಬಿದನ್ನು ಕಂಡುಕೊಳ್ಳಿರಿ. ಕೇವಲ ಬಟ್ಟೆಗಳ ಸಡಗರ(ಷೋಕಿ)ದಿಂದ ಏನು ಪ್ರಯೋಜನವು ? ಪರಮೇಶ್ವರನು ದಿಗಂಬರನಾಗಿದ್ದರೂ ಸರ್ವಜ್ಞನು. ಅವನಿಗೆ ತಿಳಿಯದ್ದಾದರೂ ಏನಿದ್ದೀತು ?

**ದೋಷೋಽಪಿ ಗುಣತಾಂ ಯಾತಿ ಪ್ರಭೋರ್ಭವತಿ ಚೇತ್ ಕೃಪಾ ।**
**ಅಂಗಹೀನೋಽಪಿ ಸೂರ್ಯೇಣ ಸಾರಥ್ಯೇ ಯೋಜಿತೋಽರುಣಃ ॥ ೫ ॥**

೫. ಯಜಮಾನನ ದಯೆಯಿದ್ದರೆ ದೋಷವೂ ಗುಣವಾಗಿಯೇ ಪರಿವರ್ತನೆಯಾಗುವದು. ಹೇಗೆಂದರೆ ಅರುಣನು ಅಂಗಹೀನನಾಗಿದ್ದರೂ ರಥವನ್ನು ನಡೆಯಿಸುವ ಕೆಲಸಕ್ಕೆ ಸೂರ್ಯನಿಂದ ನೇಮಿಸಲ್ಪಟ್ಟನು.

# ಸತ್ಯಕಾಮನ ಪತ್ರಗಳು

## ಕೆಲವು ಪ್ರಶ್ನೆಗಳು

(ಕೇಳಿದವರು : ಶ್ರೀ॥ ಗಣೇಶ ಐತಾಳರು, H.M.T. ಗಡಿಯಾರಕಾರ್ಖಾನೆ, ಬೆಂಗಳೂರು)

೧. "ಆಷಾಢಮಾಸದಲ್ಲಿ ನಾವು ಯಾವದೇ ರೀತಿಯ ಶುಭಕಾರ್ಯಗಳನ್ನು ಮಾಡುವದಿಲ್ಲ. ಈ ಮಾಸವನ್ನು ನಾವು ಒಂದು ಅಸ್ಪೃಶ್ಯಮಾಸವಾಗಿಟ್ಟಿರುವದರ ಕಾರಣವೇನು ?

೨. ಸ್ತ್ರೀ ಪದಕ್ಕೆ ಮೊದಲಿನಿಂದಲೂ ಗೌರವ, ಆದರಗಳು ಸಿಕ್ಕಿವೆ ; ಸಿಗುತ್ತಿದೆ. ಈ ಪದದಲ್ಲಿ ಅಡಕವಾಗಿರುವ ವಿಷಯವು ಯಾವುದು ?

೩. ಈ ಕಲಿಯುಗದಲ್ಲಿ ಪ್ರತಿ ಹಿಂದೂವಿನ ಕರ್ತವ್ಯವೇನು ? ಆತನ ಸಂಪರ್ಕವು ಯಾರೊಂದಿಗೆ ಹೇಗಿರಬೇಕು ? ಈ ಹಿಂದೂದೇಶದ ನವತರುಣರಿಗೆ ಪಾಶ್ಚಾತ್ಯದೇಶದ ಆದರ್ಶಗಳ ಅವಶ್ಯಕತೆಯಿದೆಯೆಂದು ನಿಮಗನಿಸುತ್ತದೆಯೆ ?

ಎಂಬೀ ನಿಮ್ಮ ಮೂರು ಪ್ರಶ್ನೆಗಳನ್ನು ಈ ಬಾರಿಗೆ ಉತ್ತರಿಸಲು ಸ್ವೀಕರಿಸಿದ್ದೇನೆ. ಉಳಿದ ಎರಡು ಪ್ರಶ್ನೆಗಳನ್ನು ವಿಚಾರಮಾಡಿ ಹಿಂದಿನಿಂದ ತಿಳಿಸುವೆನು. ಪ್ರಕೃತ- (೧) ಆಷಾಢಮಾಸದ ವಿಷಯದಲ್ಲಿ ನಿಮ್ಮ ತಿಳಿವಳಿಕೆ ಸರಿಯಲ್ಲ. ಏಕೆಂದರೆ ಚಾಂದ್ರಮಾನರೀತಿಯಾಗಿ ಆಷಾಢವನ್ನು ಶೂನ್ಯಮಾಸವೆಂದು ಪರಿಗಣಿಸಿದರೂ ಸೌರಮಾನರೀತಿಯಾಗಿ ಮಿಥುನಮಾಸವು ಪೂರೈಸುವವರೆಗೂ ಅನೇಕರು ವಿವಾಹಾದಿ ಶುಭಕಾರ್ಯಗಳನ್ನು ಆಷಾಢದಲ್ಲಿಯೇ ನೆರವೇರಿಸುತ್ತಾರೆ. ಇನ್ನು ಕರ್ಕಾಟಕ ಮಾಸ ಹುಟ್ಟಿದ ಕೂಡಲೇ ದಕ್ಷಿಣಾಯನಾರಂಭವಾಗುವದರಿಂದ ಆಪದ್ಧರ್ಮವಾಗಿ ಹೊರತು ಬೇರೆ ಸಂದರ್ಭದಲ್ಲಿ ಇಡಿಯ ದಕ್ಷಿಣಾಯನ ಪೂರ ವಿವಾಹ-ಉಪನಯನಾದಿಗಳಿಗೆ ಮುಖ್ಯಕಾಲವಲ್ಲ. ಆದರೂ ದಕ್ಷಿಣಾಯನವುಳ್ಳ ಆಷಾಢವನ್ನು ಮಾತ್ರ ಶುಭಕಾರ್ಯಗಳಿಗೆ ನಿಷಿದ್ಧವೆಂದು ಸಂಕೋಚಮಾಡಿದ್ದಾರೆ. ಒಂದು ರೀತಿಯಿಂದ ಶುಭಕಾರ್ಯಗಳಿಗೆ ಇದು ನಿಷಿದ್ಧವಾದರೂ ವ್ರತಾನುಷ್ಠಾನಗಳಿಗೆ ಪ್ರಶಸ್ತಕಾಲವಾಗಿದೆ. ಯತಿಗಳು ಮಾಡುವ ಚಾತುರ್ಮಾಸ್ಯವ್ರತ, ಕೆಲವು ವೇಳೆ ಉಪಾಕರ್ಮಾದಿಗಳು, ಸ್ನಾನದಾನಾದಿಗಳು-ಮುಂತಾಗಿ ಶರೀರ-ಮನಶ್ಶುದ್ಧಿಗಳಿಗೆ ಕಾರಣವಾದ ನಿಯಮಪ್ರಧಾನವಾದ ವ್ರತಕರ್ಮಗಳೆಲ್ಲ ಆಷಾಢದಲ್ಲಿ ನಡೆಯುತ್ತವೆ. ಆದ್ದರಿಂದ ಅದು ಅಸ್ಪೃಶ್ಯವು ಹೇಗಾದೀತು ? ಆಷಾಢ ಶುಕ್ಲ ದ್ವಾದಶಿಯಿಂದ ಕಾರ್ತಿಕ ಶುಕ್ಲ ದ್ವಾದಶೀವರೆಗೆ ವಿಷ್ಣುವು ಮಲಗಿರುತ್ತಾನೆಂದೂ ಆ ಕಾಲವು ಶುಭಕಾರ್ಯಗಳಿಗೆ ತಕ್ಕದ್ದಲ್ಲವೆಂದೂ ಹೇಳಿರುವದು ನಿಜ. ಜಗತ್ತಿನ ಸ್ಥಿತಿಕಾರಕನಾದ ವಿಷ್ಣುವು ಯೋಗನಿದ್ರೆಯಲ್ಲಿರುವಾಗ ಅವನ ಸಾನ್ನಿಧ್ಯದಲ್ಲಿಯೇ ನಡೆಯಬೇಕಾಗಿರುವ ಶುಭಕಾರ್ಯಗಳಿಗೆ ಈ ಸಮಯದಲ್ಲಿ ರಜಾಕೊಡಲಾಗಿರುತ್ತದೆ. ಮನೆಯ ಯಜಮಾನನು ಮಲಗಿದ್ದಾಗ ಯಾವ ವ್ಯವಹಾರವೂ (ಅನಿವಾರ್ಯವಾದದ್ದು ಹೊರತು) ನಡೆಯಲಾರದಷ್ಟೆ ? ಹಾಗೆಯೇ ಇದನ್ನೂ ಭಾವಿಸಬಹುದು.

೨. ಸ್ತ್ರೀ–ಎಂಬ ಪದದಲ್ಲಿರುವ ಸಕಾರ ತಕಾರ ರೇಫಗಳು–ಕ್ರಮವಾಗಿ ಸತ್ವ–ತಮ–ರಜೋಗುಣಗಳನ್ನು ಪ್ರತಿನಿಧಿಸುವವು. ಈ ಮೂರು ಗುಣಗಳ ಒಟ್ಟೇ ಪ್ರಕೃತಿಯು. ಈ ಪ್ರಕೃತಿಯೇ ಜಗತ್ತಿನ ಮೂಲವು. ಹುಟ್ಟಿರುವವರೆಲ್ಲ ಪ್ರಕೃತಿಯಿಂದಲೇ ಹೊರಬಂದಿರುತ್ತಾರೆ. ಆದ್ದರಿಂದ ಪ್ರಕೃತಿಮಾತೆಯನ್ನೇ ಹೆಸರಿಸುವ ಸ್ತ್ರೀ ಶಬ್ದವನ್ನು ಒಂದು 'ಮಂತ್ರ'ವೆಂದೇ ಬಲ್ಲವರು ತಿಳಿಯುತ್ತಾರೆ. ಸ್ತ್ರೀಯು ಮಾತೆಯಾದಾಗ ಅವಳಿಗಲ್ಲದೆ ಪ್ರಥಮಗೌರವವು ಮತ್ತಾರಿಗೆ ಸಲ್ಲಬೇಕು ? ಆಕೆಯಿಂದಲೇ ನಾವು ಹೊರಬಂದಿರುವದು. ಆಕೆಯಿಲ್ಲದಿದ್ದರೆ ನಾವೇ ಇರಲಾರೆವು. ಇದನ್ನು ಕಂಡೇ ಪೂರ್ವಿಕರು ದೇವರನ್ನೇ ಸ್ತ್ರೀಯಾಗಿ ಭಾವಿಸಿ ಲೋಕಮಾತೆ, ಜಗಜ್ಜನನೀ–ಎಂದು ಗೌರವಿಸಿದರು. ನಮ್ಮ ದೇಶ, ಭಾಷೆ, ವಿದ್ಯೆ, ಹಣ-ಮುಂತಾಗಿ ಎಲ್ಲವನ್ನೂ ಜನ್ಮಭೂಮಿ, ಮಾತೃಭಾಷೆ, ಸರಸ್ವತೀ, ಶ್ರೀ–ಇತ್ಯಾದಿಯಾಗಿ ಸ್ತ್ರೀಲಿಂಗ ಶಬ್ದಗಳಿಂದಲೇ ವ್ಯವಹರಿಸುವೆವು. ಪ್ರಥಮಗೌರವಕ್ಕೆ ಆಕೆಯೇ ಅರ್ಹಳು. ಆದ್ದರಿಂದ ಸ್ತ್ರೀ ಎಂಬಿದರ ವೈಶಿಷ್ಟ್ಯವು ಅನೇಕರೀತಿಯಿಂದ ಸಮರ್ಥಿಸಲ್ಪಟ್ಟಿದೆ. ಸದ್ಯಕ್ಕೆ ಸ್ತ್ರೀಯನ್ನು ಮಾತೆಯೆಂಬ ಭಾವನೆಯಿಂದ ಗೌರವಿಸಿದಲ್ಲಿ ಮಾನವನಿಗೆ ಇಹಪರಗಳೆರಡೂ ದೊರಕುವವು–ಎಂದು ಹೇಳಬಹುದಾಗಿದೆ.

೩. ಹಿಂದೂ ಎಂದರೆ ಯಾರು ? ಎಂಬಿದು ವಿವಾದಾಸ್ಪದವಾಗಿದೆ. ವಿಶಾಲವಾದ ಅರ್ಥದಲ್ಲಿ ಸ್ವೀಕರಿಸಿದರೆ ಹಿಂದೂ ದೇಶದಲ್ಲಿರುವವರನ್ನೆಲ್ಲ ಹಿಂದೂಗಳೆನ್ನಬೇಕಾಗುತ್ತದೆ. ಸಂಕುಚಿತಾರ್ಥವನ್ನು ಸ್ವೀಕರಿಸಿದರೆ ಸನಾತನ–ಆರ್ಯ-ವೈದಿಕ ಧರ್ಮಾವಲಂಬಿಗಳನ್ನು ಹಾಗೆ ಕರೆಯಬೇಕಾಗುತ್ತದೆ. ಈಗಿನ ಭಾರತೀಯರಲ್ಲಿ ಅಪ್ಪಟ ಹಿಂದೂಗಳನ್ನು ಹುಡುಕಿ ತೆಗೆಯಬೇಕಾಗಿದೆ. ಏಕೆಂದರೆ ಸಾವಿರಾರು ವರ್ಷಗಳಿಂದ ನಮ್ಮ ಸಂಸ್ಕೃತಿಯೊಡನೆ ಮುಸಲ್ಮಾನ–ಕ್ರೈಸ್ತ ಸಂಸ್ಕೃತಿಗಳು ಬೆರೆತುಬಿಟ್ಟಿವೆ. ಆದ್ದರಿಂದ ಹೆಚ್ಚಿನ ವಿವಾದಕ್ಕೆ ಹೋಗದೆ ವೈದಿಕ ಸಂಸ್ಕೃತಿಯಲ್ಲಿ ಅಭಿಮಾನವುಳ್ಳ ವರ್ಣಾಶ್ರಮಾಚಾರಗಳನ್ನು ಗೌರವಿಸುವವರನ್ನು ಹಿಂದೂಗಳೆಂದಿಟ್ಟುಕೊಳ್ಳೋಣ. ಇಂಥ ಹಿಂದುವು ಮೊದಲು ಪರಮತಸಹಿಷ್ಣುತೆಯನ್ನು ಪ್ರಕಟಿಸಬೇಕು. ಏಕೆಂದರೆ ವೇದವು ಉಪದೇಶಿಸುತ್ತಿರುವ ತತ್ತ್ವವು ಸಾರ್ವಕಾಲಿಕವೂ ಸರ್ವಧರ್ಮಗಳ ತಿರುಳೂ ಆದ ಪರಬ್ರಹ್ಮವಾಗಿದೆ. ಅನಂತರ ಹಿಂದೂವು ತಾನು ಹಿಂದುವಾಗಿಯೇ ಉಳಿಯಲು ಅಗತ್ಯವಾದ ಬಾಹ್ಯ ಆಚಾರವಿಚಾರಗಳನ್ನೂ ನಡೆನುಡಿಗಳನ್ನೂ ಅಳವಡಿಸಿಕೊಳ್ಳಬೇಕು. ಅನಂತರ ಆದರ್ಶಗಳ ವಿಷಯಕ್ಕೆ ಹಿಂದೂತ್ವಕ್ಕೆ ಅವಿರೋಧವಾದ ಹಾಗೂ ಎಲ್ಲರೂ ಸಮ್ಮತಿಸುವ ಆದರ್ಶಗಳನ್ನು ಎಲ್ಲಿಂದಲಾದರೂ ಪಡೆದುಕೊಳ್ಳಲು ಸಿದ್ಧನಾಗಬೇಕು. ನಿಜವಾಗಿ ನೋಡಿದರೆ ನಮ್ಮ ಹಿಂದೂಧರ್ಮದಲ್ಲಿ ಆದರ್ಶಗಳಿಗೆ ಕೊರತೆಯೇನಿಲ್ಲ. ಹೀಗೆ ಸಾರವಾದದ್ದನ್ನು ಸ್ವೀಕರಿಸಿ ನಿಸ್ಸಾರವಾದದ್ದನ್ನು ಬಿಟ್ಟು ಸರ್ವಭೂತಮೈತ್ರಿ, ತ್ಯಾಗ, ಪರೋಪಕಾರ–ಗಳಿಂದ ಜೀವನವನ್ನು ಸಾಗಿಸುವವನೇ ನಿಜವಾದ ಹಿಂದುವೆನಿಸುವನು.

———— ————

# ಆರಿಸಿದ ಅರಳುಮೊಗ್ಗುಗಳು

(ಶ್ರೀ ಸಮರ್ಥರಾಮದಾಸರ ವಚನಗಳಿಂದ)

೧. ಪರಮಾತ್ಮನು ಯಾವಾಗಲೂ ಹತ್ತಿರದಲ್ಲಿಯೇ ಇರುತ್ತಾನೆ. ಆದಾಗ್ಯೂ ದಯೊಮಯತೆಯಿಂದ ಆತನು ಭಕ್ತನನ್ನು ಕೆಲವುಟ್ಟಿಗೆ ಪರೀಕ್ಷಿಸುತ್ತಾನೆ. ಭಕ್ತಾಭಿಮಾನಿಯಾದ ಆತನು ಸುಖ, ಆನಂದ, ಮೋಕ್ಷವನ್ನು ಕೊಡುವವನಾಗಿರುವದರಿಂದ ಭಕ್ತನನ್ನು ಎಂದಿಗೂ ಕೈಬಿಡಲಾರನು.

೨. ಯಾರ ಸಹವಾಸದಿಂದ ಮನಸ್ಸಿನ ಸಮಾಧಾನಕ್ಕೆ ಭಂಗವು ಬರುವದೋ ಅಹಂಕಾರವು ಅಂಟಿಕೊಳ್ಳುವದೋ ಶ್ರೀರಾಮಭಕ್ತಿಯು ವಿಯೋಗವಾಗುವದೋ, ಅಂಥವರ ಸಂಗದಲ್ಲಿ ತಿರುಳೇನಿದ್ದೀತು ? ಆದ್ದರಿಂದ ಅದನ್ನು ಸಂಪೂರ್ಣವಾಗಿ ಬಿಟ್ಟುಬಿಡಬೇಕು.

೩. ಯಾವನ ಆಚಾರ ವಿಚಾರ-ಉಚ್ಚಾರಗಳು ಏಕರೂಪವಾಗಿ (ನುಡಿಯಂತೆ ನಡೆ)ರುವವೋ ಯಾವನು ಅನೇಕತ್ವದಲ್ಲಿ ಏಕತ್ವ (ಆತ್ಮತ್ತ್ವ)ವನ್ನು ಕಾಣುವನೋ ಯಾವನು ಜ್ಞಾನದಿಂದ ಕೂಡಿಯೂ ಸಗುಣೋಪಾಸಕನಾಗಿರುವನೋ ಇಂಥವನು ಸರ್ವೋತ್ತಮನಾದ ಶ್ರೀರಾಮನ ದಾಸನು ; ಇಂಥವನು ಜಗತ್ತಿನಲ್ಲಿ ಧನ್ಯನೆನಿಸುವನು.

೪. ಯಾವನು ಯೌವನಾವಸ್ಥೆಯಲ್ಲಿಯೇ ಅರಣ್ಯವಾಸವನ್ನು ಸ್ವೀಕರಿಸಿ ವಿಷಯಸುಖಗಳ ಕಲ್ಪನಾಜಾಲದಿಂದ ಮುಕ್ತನಾಗಿರುವನೋ ಯಾವನ ಮನಸ್ಸು ಎಂಥ ಕಠಿನಪ್ರಸಂಗಗಳಲ್ಲಿಯೂ ಶ್ರೀರಾಮಭಕ್ತಿಯನ್ನು ಬಿಟ್ಟು ಕದಲುವದಿಲ್ಲವೋ ಇಂಥವನು ಜಗತ್ತಿನಲ್ಲಿ ಧನ್ಯನೆನಿಸುವನು.

೫. ಎಲೈ ಮನಸ್ಸೆ, ವಿಷಯಗಳ ಕಲ್ಪನೆಗಳಿಗೆ ಎಣಿಕೆಯೇ ಇರುವದಿಲ್ಲ. ಈ ವಿಷಯಗಳ ವಶನಾದವನಿಗೆ ಶ್ರೀರಾಮನ ದರ್ಶನವು ಎಂದಿಗೂ ಆಗಲಾರದು. ಯಾವನಲ್ಲಿ ವಿಷಯಗಳ ಇಚ್ಛೆಯೂ ಅವುಗಳ ಬಗೆಗೆ ಪರಮಾದರವೂ ಇರುವದೋ ಅಂಥವನಿಗೆ ಶ್ರೀರಾಮನಲ್ಲಿ ಪ್ರೀತಿಯು ಎಂದಿಗೂ ಉಂಟಾಗಲಾರದು. ಮತ್ತು ಶ್ರೀರಾಮನ ಪ್ರಾಪ್ತಿಯೂ ಅಂಥವನಿಗೆ ಆಗಲಾರದು.

೬. ಎಲೈ ಮನಸ್ಸೆ, ಶ್ರೀರಾಮನು ಕಲ್ಪವೃಕ್ಷವೂ ಕಾಮಧೇನುವೂ ನಿಧಿಯೂ ಎಲ್ಲವುಗಳ ಸಾರವೂ ಚಿಂತಾಮಣಿಯೂ ಆಗಿರುವನು. ಅವನನ್ನು ಏನೆಂದು ಬಣ್ಣಿಸಲಿ ? ಅವನ ಸತ್ತಾಬಲದಿಂದಲೇ ಎಲ್ಲವೂ ನಡೆಯುವವೆಂದಮೇಲೆ ಅವನನ್ನು ಯಾರೊಡನೆ ಹೋಲಿಸಲಿ ?

೭. ಪಾಪವನ್ನು ಮಾಡಿರುವವನು ಕಲ್ಪವೃಕ್ಷದ ಕೆಳಗೇ ಕುಳಿತಿದ್ದರೂ ಅವನಿಗೆ ದುಃಖವೇ ಅಂಟಿಕೊಳ್ಳುವಂತೆ ಸಜ್ಜನರ ಸಹವಾಸದಲ್ಲಿದ್ದರೂ ಕುತರ್ಕವನ್ನೇ ಬೆಳೆಯಿಸುತ್ತಾ ಹೋದವನಿಗೆ ದುಃಖವೇ ಫಲವಾಗುವದು.

# ಸಚ್ಚಿದಾನಂದಮನನ

( ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು )

೧೭. ಬೆಂಕಿಯ ಬಿಸಿ, ಬೆಳಕುಗಳು ಅದರ ಸ್ವರೂಪವೇ ಆಗಿರುವದರಿಂದ ಅದರ ಒಂದು ಕಡೆಯಲ್ಲಿ ಬಿಸಿಯೂ ಮತ್ತೊಂದು ಕಡೆಯಲ್ಲಿ ಬೆಳಕೂ ಇರುವವೆಂದು ಹೇಳುವದಕ್ಕೆ ಬರುವದಿಲ್ಲ. ಅದರಂತೆ ಆತ್ಮನ ಸತ್ತೆಯೂ ಚಿತ್ತೂ ಅವನ ಸ್ವರೂಪವೇ ಆಗಿರುವದರಿಂದ ಅವೆರಡೂ ಅವನಲ್ಲಿ ಎಲ್ಲೆಲ್ಲಿಯೂ ಇರುತ್ತವೆ. ಒಂದು ಭಾಗದಲ್ಲಿ ಸತ್ತ್ವವೂ ಇನ್ನೊಂದು ಭಾಗದಲ್ಲಿ ಚಿತ್ತ್ವವೂ ಇರುವದಿಲ್ಲ.

೧೮. ಯಾವನೂ 'ನಾನು ಇಲ್ಲ ; ಇರಲಿಲ್ಲ, ಅಥವಾ ಇರುವದಿಲ್ಲ' ಎಂದು ಕಲ್ಪಿಸುವದಕ್ಕೆ ಬರುವದಿಲ್ಲ. ಏಕೆಂದರೆ ಹಾಗೆಂದು ಕಲ್ಪಿಸುವದಕ್ಕೆ ಪ್ರಯತ್ನಪಡುವವನ ಸ್ವರೂಪವೇ ಸತ್ತಾಗಿರುತ್ತದೆ. ಇದರಂತೆ ಯಾವನೂ ನಾನು ಅರಿಯುತ್ತಿಲ್ಲ, ಅರಿಯಲಿಲ್ಲ, ಅಥವಾ ಅರಿಯುವದಿಲ್ಲ-ಎಂದು ಕಲ್ಪಿಸುವದಕ್ಕೆ ಬರುವದಿಲ್ಲ. ಏಕೆಂದರೆ ಹಾಗೆಂದು ಕಲ್ಪಿಸುವದಕ್ಕೆ ಪ್ರಯತ್ನಪಡುವವನ ಸ್ವರೂಪವೇ ಚಿತ್ತಾಗಿರುತ್ತದೆ.

೧೯. ಸತ್ತ್ವವಿಲ್ಲದ ಚಿತ್ತನ್ನು ಕಲ್ಪಿಸುವದಕ್ಕೇ ಆಗುವದಿಲ್ಲ. ಏಕೆಂದರೆ ಚಿತ್ತೆಂದರೆ ಇರುವ ಚಿತ್ತು. ಹೀಗೆಯೇ ಚಿತ್ತ್ವವಿಲ್ಲದ ಸತ್ತೆಯನ್ನು ಕಲ್ಪಿಸುವದಕ್ಕೇ ಆಗುವದಿಲ್ಲ. ಏಕೆಂದರೆ ಹಾಗೆಂದು ಕಲ್ಪಿಸುವವನ ಇರವು ಚಿದ್ರೂಪವಾಗಿಯೇ ಇರಬೇಕಾಗುತ್ತದೆ.

೨೦. ಹುಟ್ಟಿದ ವಸ್ತು ಹೊಸದಾಗಿ ಸತ್ತೆಯಿಂದ ಕೂಡಿಕೊಂಡಂತೆ ತೋರುತ್ತದೆ. ಆದರೆ ಈ ತೋರಿಕೆಯು ಭ್ರಾಂತಿಮಾತ್ರವಾಗಿರುತ್ತದೆ. ಏಕೆಂದರೆ ಸತ್ತೆಯಿಂದ ಕೂಡದೆ ಇರುವ ವಸ್ತುವನ್ನು ಕಲ್ಪಿಸುವದಕ್ಕೇ ಆಗುವದಿಲ್ಲ. ಹುಟ್ಟಿದ ವಸ್ತುವೆಂಬುದು ಸತ್ತಾಗಲಾರದು. ಏಕೆಂದರೆ ಸತ್ತೆಂದರೆ ಯಾವಾಗಲೂ ಇರುವದು. ಸತ್ತು ಹುಟ್ಟಲಾರದು. ಏಕೆಂದರೆ ಸತ್ತಿನಲ್ಲಿ ಯಾವ ಮಾರ್ಪಾಡಾದರೂ ಅದು ಅಸತ್ತಾಗಬೇಕಾಗುತ್ತದೆ. ಹೀಗೆಯೇ ಹುಟ್ಟಿದ ವಸ್ತುವು ಹೊಸದಾಗಿ ತೋರಿಕೊಳ್ಳುವದೆಂಬುದೂ ಭ್ರಾಂತಿಮಾತ್ರವಾಗುತ್ತದೆ. ಏಕೆಂದರೆ ಸ್ಫೂರ್ತಿ(ತೋರಿಕೆ) ಯಿಲ್ಲದ ವಸ್ತು ಯಾವದನ್ನೂ ಕಲ್ಪಿಸುವದೇ ಆಗುವದಿಲ್ಲ. ಹುಟ್ಟಿದ ವಸ್ತುವೆಂಬುದು ಚಿತ್ತಾಗಲಾರದು. ಏಕೆಂದರೆ ಚಿತ್ತೆಂದರೆ ಯಾವಾಗಲೂ ಬೆಳಗುತ್ತಿರುವದು. ಚಿತ್ತು ಹುಟ್ಟಲಾರದು. ಏಕೆಂದರೆ ಚಿತ್ತಿನಲ್ಲಿ ಮಾರ್ಪಾಡಾದರೆ ಚಿತ್ತೇ ಅಚಿತ್ತಾಗಬೇಕಾಗುತ್ತದೆ.

೨೧. ಹುಟ್ಟಿದವು-ಎಂಬ ವಸ್ತುಗಳಲ್ಲಿ ಕಾಣಬರುವ ಸತ್ತೆಯೂ ಚಿತ್ತೂ ಆಭಾಸಮಾತ್ರವು. ನಿಜವಾದ ಸತ್ತೂ ಚಿತ್ತೂ ನಮ್ಮ ಸ್ವರೂಪವೇ, ಆತ್ಮನೇ ಆಗಿರುವದು. ಸನ್ಮಾತ್ರನಾದ ಆತ್ಮನಲ್ಲಿ ಸದಾಭಾಸವಾದ ಅನಾತ್ಮವು ಕಲ್ಪಿತವಾಗುತ್ತಿರುವದು. ಚಿನ್ಮಾತ್ರನಾದ ಆತ್ಮನಲ್ಲಿ ಚಿದಾಭಾಸವಾದ ಅನಾತ್ಮವು ಕಲ್ಪಿತವಾಗುತ್ತಿರುವದು. ಈ ಕಲ್ಪನೆಯೆಂಬುದು ಆಭಾಸವೇ. ಆತ್ಮನೊಬ್ಬನೇ ಪರಮಾರ್ಥವು.

೨೨. ಸದ್ರೂಪನಾದ ಆತ್ಮನಲ್ಲಿ ಕಲ್ಪಿತವಾದ ವಸ್ತುಗಳೆಲ್ಲವೂ ಸದಾಭಾಸವಾಗಿರುವವು. ಕೊನೆಯಲ್ಲಿ ನೋಡಿದರೆ ಸತ್ತೇ ಆಗಿರುವವು. ಚಿದ್ರೂಪನಾದ ಆತ್ಮನಲ್ಲಿ ಕಲ್ಪಿತವಾದ ವಸ್ತುಗಳೆಲ್ಲವೂ ಚಿದಾಭಾಸವಾಗಿರುವವು. ಚಿದ್ವ್ಯಾಪ್ತವಾಗಿರುವವು. ಕೊನೆಯಲ್ಲಿ ನೋಡಿದರೆ ಚಿತ್ತೇ ಆಗಿರುವವು. ಸದ್ರೂಪನಾದ ಆತ್ಮನಿಗಿಂತ ಬೇರೆಯಾದ ವಸ್ತುವೇ ಇರುವದಿಲ್ಲ. ಸಮುದ್ರದಲ್ಲಿ ಕಲ್ಪಿಸಿರುವ ನೊರೆ, ತೆರೆ, ಗುಳ್ಳೆ ಮುಂತಾದದ್ದು ಯಾವದು ತಾನೆ ಸಮುದ್ರಕ್ಕಿಂತ ಬೇರೆಯಾಗಿರುತ್ತದೆ ?

೨೩. ಈ ಜಗತ್ತು ಸನ್ಮೂಲವು, ಸದಾಯತನವು, ಸತ್ಪ್ರತಿಷ್ಠವು-ಎಂದರೆ ಸತ್ತಿನಿಂದ ಬಂದಿದೆ, ಸತ್ತಿನಲ್ಲಿದೆ, ಸತ್ತನ್ನೇ ಸೇರುವದು-ಎಂದು ಶ್ರುತಿಯು ಸಾರುತ್ತಿದೆ. ಸತ್ತೇ ಚಿತ್ತಾದ್ದರಿಂದ ಜಗತ್ತೆಲ್ಲವೂ ಚಿನ್ಮೂಲವು, ಚಿದಾಯತನವು, ಚಿತ್ಪ್ರತಿಷ್ಠವು-ಎಂದೂ ಹೇಳಬಹುದು.

೨೪. ಉಪನಿಷತ್ತಿನಲ್ಲಿ ಒಂದು ಅಮೋಘವಾಕ್ಯವಿದೆ. 'ಆನಂದದಿಂದಲೇ ಈ ಭೂತಗಳು ಹುಟ್ಟುವವು-ಎಂಬಿದು ಪ್ರಸಿದ್ಧವು. ಇವು ಆನಂದದಿಂದಲೇ ಜೀವಿಸುತ್ತಿರುವವು. ಆನಂದದ ಕಡೆಗೆ ಹೊರಟು ಆನಂದವನ್ನೇ ಸೇರಿಕೊಳ್ಳುವವು'. ಇದೊಂದು ಹರ್ಷದಾಯಕವಾದ ಸಂದೇಶವು. ತಲ್ಲಣಗೊಳ್ಳುತ್ತಿರುವ ಜೀವರುಗಳಿಗೆಲ್ಲ ಆನಂದದ ಒಸಗೆಯನ್ನು ತಂದುಕೊಡುವ ವಾಣಿಯು.

೨೫. ಪರಮಾತ್ಮನು ಆನಂದಸ್ವರೂಪನು. ಅವನೇ ಈ ಜಗತ್ತನ್ನು ಸೃಷ್ಟಿಸಿ ಇದರ ಒಳಗೆ ಜೀವರೂಪದಿಂದ ಹೊಕ್ಕಿರುವನು. ಆದ್ದರಿಂದ ಜಗತ್ತೆಲ್ಲವೂ ಆನಂದಮಯವಾಗಿದೆ. ಜೀವರುಗಳೆಲ್ಲರೂ ಆನಂದಸ್ವರೂಪರಾಗಿರುತ್ತಾರೆ. ಇದನ್ನು ತಿಳಿದುಕೊಂಡವರಿಗೆ ಜೀವನವೆಲ್ಲವೂ ಆನಂದಮಯವಾಗಿರುತ್ತದೆ- ಎಂಬಿದು ವೇದಾಂತದ ಉಪದೇಶವು. ಇದನ್ನು ಮನದಟ್ಟುಮಾಡಿಕೊಂಡವರಿಗೆ ದುಃಖಕ್ಕೆ ಸ್ವಲ್ಪವೂ ಎಡೆಯಿಲ್ಲ.

೨೬. ವಿಜ್ಞಾನವೂ ಆನಂದವೂ ಆದದ್ದು ಬ್ರಹ್ಮವು-ಎಂದು ಶ್ರುತಿಯಲ್ಲಿದೆ. ಸತ್ತೇ ಚಿತ್ತು-ಎಂಬಿದನ್ನು ಹಿಂದೆ ಮನದಂದುಕೊಂಡದ್ದಾಗಿದೆ. ಈ ಶ್ರುತಿಯು ಚಿತ್ತೇ ಆನಂದವು-ಎಂದು ಹೇಳುತ್ತಿದೆ. ಆದ್ದರಿಂದ ಸತ್ತು, ಚಿತ್ತು, ಆನಂದ-ಎಲ್ಲವೂ ಒಂದೇ ಎಂದು ಸಿದ್ಧಾಂತವಾಯಿತು. ಎಲ್ಲವೂ ಸತ್ತು, ಎಲ್ಲವೂ ಚಿತ್ತು-ಎಂದು ಹಿಂದಿನ ಮನನದಲ್ಲಿ ಗೊತ್ತಾಗಿದೆ. ಆದ್ದರಿಂದ ಎಲ್ಲವೂ ಆನಂದವೇ. ಸತ್ತೇ ಬ್ರಹ್ಮವು. ಎಲ್ಲವೂ ಸತ್ತೇ ಆಗಿದ್ದರೂ ಸತ್ತಿನಲ್ಲಿ ಸತ್ತು, ಅಸತ್ತು-ಎಂಬ ವಿಭಾಗ ಮನಸ್ಸು ಕಲ್ಪಿಸಿಕೊಂಡಿರುವದು. ಹಾಗೆಯೇ ಚಿತ್ತೇ ಬ್ರಹ್ಮವಾಗಿದ್ದರೂ ಚಿದಚಿದ್ವಿಭಾಗಗಳನ್ನೂ ಆನಂದವೇ ಬ್ರಹ್ಮವಾಗಿದ್ದರೂ ಆನಂದ-ದುಃಖಗಳೆಂಬ ವಿಭಾಗಗಳನ್ನೂ ಮನಸ್ಸೇ ಕಲ್ಪಿಸಿರುತ್ತದೆ. ಅತ್ಯಂತ ಮಧುರವಾದದ್ದೂ ಒಮ್ಮೊಮ್ಮೆ ನಾಲಗೆಗೆ ಕಹಿಯಾಗಿ ತೋರುವಂತೆ ಮಿಗಿಲಿಲ್ಲದ ಆನಂದವೇ ಮನಸ್ಸಿಗೆ ದುಃಖವಾಗಿ ತೋರುತ್ತಿರುವದು.

---

# ಪಕ್ಷಾಂತರಗೊಳಿಸುವಿಕೆ

(ಪತ್ರಿಕಾಪಾಠಕ)

ಇತ್ತೀಚೆಗೆ ಭಾರತದೇಶದ ರಾಜಕೀಯಕ್ಷೇತ್ರದಲ್ಲಿ ಉಂಟಾಗಿರುವ ಗೊಂದಲದ ವಿಚಿತ್ರ ಪರಿಸ್ಥಿತಿಯಲ್ಲಿ ಪಕ್ಷಾಂತರಿಗಳ ಹಾವಳಿ ಹೆಚ್ಚಾಗಿದ್ದು ಹೇಗಾದರೂ ಇದನ್ನು ತಡೆಗಟ್ಟಬೇಕೆಂದು ವಿಚಾರವಂತರೆಲ್ಲ ಒಪ್ಪಿರುತ್ತಾರೆ. ಆದರೆ ಯಾವದಾದ ರೊಂದು ಸಾಂಕ್ರಾಮಿಕರೋಗವು ಹಬ್ಬಿದರೆ ಆ ಮಾರಿಯು ಕೆಲವು ಜೀವಿಗಳನ್ನಾ ದರೂ ಬಲಿತೆಗೆದುಕೊಳ್ಳದೆ ತೃಪ್ತವಾಗುವಂತಿಲ್ಲ. ಅದರಲ್ಲಿಯೂ ಶಾರೀರಕ- ಮಾನಸಿಕ ದೌರ್ಬಲ್ಯವುಳ್ಳವರಿಗೆ ಅದು ಮೊದಲು ಅಂಟಿಕೊಳ್ಳುತ್ತದೆ. ಹಾಗೆಯೇ ಅತ್ಯಶನ- ಅತಿಪಾನ-ಸ್ವೇಚ್ಛಾಚಾರ- ನಿರತರಿಗೂ ಅದು ಸರಿಯಾಗಿ ಬುದ್ಧಿಯನ್ನು ಕಲಿಸಿ ಅಂಥವರನ್ನು ಶಿಕ್ಷಿಸುತ್ತದೆ. ಹಾಗೆಯೇ ಈ ಪಕ್ಷಾಂತರಸಾಂಕ್ರಾಮಿಕರೋಗಕ್ಕೆ ಈಗೀಗ ರಾಜಕಾರಣಿಗಳು ತುತ್ತಾಗುತ್ತಿದ್ದು ಮುಂದಿನ ಚುನಾವಣಾಯಜ್ಞದಲ್ಲಿ ಪಶುಗಳಾಗಿ ಭಾಗವಹಿಸಿ ತಮ್ಮ ಜೀವಿತವನ್ನೇ ಸಮರ್ಪಿಸಿಕೊಳ್ಳುವ ಭವಿಷ್ಯವು ಸಮೀಪಸ್ಥವಾಗಿದೆ. ಆತ್ಮಬಲವಿಲ್ಲದ ಹಾಗೂ ಸ್ವಯಂ ಪ್ರಜ್ಞೆಯಾಗಲಿ, ತಪೋ ಯೋಗಾದಿಗಳ ಹಿನ್ನೆಲೆಯಾಗಲಿ ಇಲ್ಲದ ಇಂಥ ನಾಯಕರುಗಳಿಂದ ದೇಶದ ಅಭ್ಯುದಯವಾಗಲಿ, ವ್ಯಕ್ತಿಯ ಉದ್ಧಾರವಾಗಲಿ- ಖಂಡಿತ ಸಾಧ್ಯವಾಗುವಂತಿಲ್ಲ. ಆದರೂ ಜನತೆಯ ದುರದೃಷ್ಟವೂ ಪರ್ವಕಾಲವೂ ಕಳೆಯುವವರೆಗೂ ಈ ರಾಜಕೀಯಕ್ಷೋಭೆಯಿಂದ ನಾವು ಪಾರಾಗುವಂತಿಲ್ಲ. ಸದ್ಯಕ್ಕೆ ಇದೊಂದು ಪ್ರಾರಬ್ಧ ವೆಂದು ಭಾವಿಸೋಣ.

ಆದರೆ ಅಧ್ಯಾತ್ಮದೃಷ್ಟಿಯಿಂದ ಪ್ರತಿಯೊಬ್ಬರೂ ಕೈಗೊಳ್ಳಬೇಕಾದ ಪಕ್ಷಾಂತರ ವೊಂದಿದೆ. ಅದು ಮಾನವನ ಯಾವ ವಯಸ್ಸಿನಲ್ಲಿ, ಯಾವ ಸ್ಥಿತಿಯಲ್ಲಿ ಒದಗಿ ಬಂದರೂ ಅಂಥವನನ್ನು ಪುಣ್ಯವಂತನೆಂದೇ ಕರೆಯಬೇಕು. ಆ ಪಕ್ಷಾಂತರವು ಮಾನವನ ಅಭ್ಯುದಯದ ಪ್ರಥಮವಾದ ಹೆಜ್ಜೆಯಾಗಿದೆ. ಅದೇ ದೈವೀಸಂಪತ್ ಪಕ್ಷಾಂತರವು. ಸಾಮಾನ್ಯವಾಗಿ ಮನುಷ್ಯನೆಂದರೆ ಪಾಪಪುಣ್ಯಗಳ ಸಂಮಿಶ್ರ ಫಲ ವಾಗಿ ಜನ್ಮವೆತ್ತಿರುವ ವ್ಯಕ್ತಿಯು. ಹುಟ್ಟಿದ ಮೇಲೆ ಮನುಷ್ಯನಿಗೆ ಇತರ ಪಶು ಪ್ರಾಣಿಗಳಿಗಿಂತಲೂ ಅಸಾಧಾರಣವಾದ ಎಂದರೆ ಹೆಚ್ಚಿನದಾದ 'ಅಂತಃಕರಣ'ವೆಂಬ ಒಂದು ಸಾಧನವನ್ನು ಪರಮಾತ್ಮನು ಅನುಗ್ರಹಿಸಿ ಅದನ್ನು ಬೇಕಾದಂತೆ ಉಪಯೋ ಗಿಸಿಕೊಳ್ಳುವ ಸ್ವಾತಂತ್ರ್ಯವನ್ನೂ ನೀಡಿರುತ್ತಾನೆ. ಆದರೆ ಆಸುರೀಪಕ್ಷಾಂತರಿಗಳ ಪಿಡುಗಿಗೆ ಒಳಗಾಗಿರುವ ಮಾನವನಿಗೆ ಇದೇ ಒಂದು ಶಾಪವಾಗಿದೆ. ಹೇಗೆಂದರೆ ಈ ಅಂತಃಕರಣವನ್ನು ಆವರಿಸಿರುವ ಕಾಮಕ್ರೋಧಾದಿಗಳೂ ಶೋಕಮೋಹಾದಿಗಳೂ ಮಾನವನನ್ನು ಕ್ಷಣಕಾಲವೂ ಸುಖವಾಗಿ ಇರಗೊಳಿಸದೆ ತಮ್ಮ ತಮ್ಮ ಕಡೆಗೆ ಪಕ್ಷಾಂತರಗೊಳಿಸುತ್ತಲೇ ಇರುವವು. ಒಂದೊಂದು ಆಸುರೀಪಕ್ಷವೂ ತನ್ನ ಶಕ್ತಿ ಯನ್ನೆಲ್ಲ ಬೀರಿ ಮಾನವನನ್ನು ತನ್ನ ಕಡೆಗೇ ಸೆಳೆಯುತ್ತಿರುವದರಿಂದ ಈ ಮಾನವನು ಯಾವದನ್ನೂ ಸಾಧಿಸಲಾರದೆ ತೊಳಲಾಡುತ್ತಿರುವನು.

ಈಗ ಈ ಪಕ್ಷಾಂತರಬಾಧೆಯಿಂದ ಮಾನವನು ಉದ್ಧಾರವಾಗಲು ಉಪಾಯ ಗಳೇನಾದರೂ ಇವೆಯೆ ? ಎಂಬಿದನ್ನು ನೋಡೋಣ. ಮೊದಲು ಮನುಷ್ಯನು ತನ್ನ ಮನಸ್ಸು ಅಲ್ಲಾಡದೆ ನಿಲ್ಲುವಂಥ ಒಂದು ಭದ್ರವಾದ ಆಶ್ರಯವನ್ನು ಹುಡುಕಿ ಕೊಳ್ಳಬೇಕು. ದೈವೀಸಂಪತ್‌ಪಕ್ಷದವರು ಈ 'ಅಭಯವಾದ ಆಶ್ರಯ'ವನ್ನು ನೀಡಲು ಸಿದ್ಧರಾಗಿದ್ದಾರೆ. ಕಾರಣವೇನೆಂದರೆ : ಆ ಪಕ್ಷದವರು ನಂಬಿರುವ ವಸ್ತುವು ಮಾತ್ರವೇ ಅಭಯವೂ ಅಮರವೂ ಅಮೃತವೂ ಅಜವೂ ಶಾಶ್ವತವೂ ಆಗಿರುವದು. ಅದಕ್ಕೆ ಭಗವಂತನೆಂದು ಹೆಸರು. ಆದರೆ ಒಮ್ಮೆಗೇ ಆ ಪಕ್ಷಕ್ಕೆ ಸೇರಲು ಮಾನವ ನಿಗೆ ಅವನ ಸಂಶಯವೇ ಅಡ್ಡಿಯಾಗಿರುವದು. ಹೇಗೆಂದರೆ : ಭಗವಂತನೆಂಬುವನೇ ಇದ್ದಾನೊ, ಇಲ್ಲವೊ ? ಎಂಬಿದು, ಆ ಪಕ್ಷದವರ ಸಂಖ್ಯೆಕೂಡ ಇತರರಿಗಿಂತ ಕಡಿಮೆ ಯಾಗಿರುವದು, ಅದು ಹೆಚ್ಚು ಪ್ರಚಾರದಲ್ಲಿಲ್ಲದಿರುವದು, ತಾತ್ಕಾಲಿಕವಾದ ಇಂದ್ರಿಯಸುಖಗಳಿಗೆ ಅಲ್ಲಿ ಅವಕಾಶವು ಕಡಿಮೆಯಾಗಿರುವದು- ಇವೆಲ್ಲ ದೈವೀ ಸಂಪತ್‌ಪಕ್ಷಕ್ಕೆ ಮಾನವನು ಸೇರಲು ಅಡಚಣೆಗಳಾಗಿರುವವು. ಆದರೆ ಈ ಪಕ್ಷದಲ್ಲಿ ಕಡ್ಡಾಯವಾಗಿ ಪ್ರತಿಯೊಬ್ಬನಿಗೂ ಸಿಕ್ಕಿಯೇತೀರುವ ಮೋಕ್ಷಪದವಿ, ಆನಂದದ ಸಮತೆ, ಭಗವಂತನೊಡನೆ ನಲಿದಾಡುವ ಭಾಗ್ಯ, ಆತನ ಅರ್ಧಾಸನವೇಕೆ, ಪೂರ್ಣಪೀಠವೇ ತನ್ನದಾಗುವ ಭವಿಷ್ಯ-- ಇವುಗಳನ್ನು ಯೋಚಿಸಿದರೆ ಯಾವ ವಿವೇಕಿಯಾದರೂ ಈ ಪಕ್ಷವನ್ನು ಸೇರದೆ ಇರಲಾರನು. ಇದರಲ್ಲಿ ಮತ್ತೊಂದು ಹೆಚ್ಚಿನ ಸುಖವೇನೆಂದರೆ : ಒಮ್ಮೆ ಈ ಪಕ್ಷವನ್ನು ಸೇರಿದವನು ಎಂದಿಗೂ ಪಕ್ಷಾಂತರ ಮಾಡಲೇ ಆರನು. ಅಥವಾ ತಾನು ಸೇರಿದ ಪಕ್ಷದಲ್ಲಿ ಅತೃಪ್ತಿಯನ್ನಾಗಲೀ ದುಃಖ ವನ್ನಾಗಲೀ ಹೊಂದಲೇ ಆರನು. ಇಲ್ಲಿ ಅಧಿಕಾರಕ್ಕಾಗಿ ಗುದ್ದಾಟವಿಲ್ಲ. ಒಬ್ಬರ ನ್ನೊಬ್ಬರು ಉರುಳಿಸುವಂಥ ಭಯವಿಲ್ಲ. ಈ ಪಕ್ಷದಲ್ಲಿ ಒಳವಿಭಾಗಗಳಿಲ್ಲ. ಎಷ್ಟೇ ಜನರು ಸೇರಿದರೂ ನೂಕುನುಗ್ಗಲಾಗಲಿ ನಿರಾಶೆಯಾಗಲಿ ಇರುವದಿಲ್ಲ. ಇಲ್ಲಿ ಪ್ರತಿಯೊಬ್ಬನೂ ತನ್ನ ಅಂತಃಕರಣದಲ್ಲಿ ಪೂರ್ಣವಾದ ಆನಂದವನ್ನು ಅನುಭವಿ- ಸುತ್ತಾ ಉಳಿದವರಿಗೂ ಅದನ್ನು ಸಮೃದ್ಧಿಯಾಗಿ ಹಂಚಬಹುದಾಗಿದೆ. ಆದರೆ ದೈವೀಸಂಪತ್‌ಪಕ್ಷವನ್ನು ಮಾನವನು ತನ್ನ ಭಾಗ್ಯಬಲದಿಂದಲೇ ಆರಿಸಿಕೊಳ್ಳಬೇಕಾ ಗಿದೆ. ಇಂಥ ಪಕ್ಷಾಂತರಮಾಡುವ ಅವಕಾಶವು ಮಾನವನಿಗೆ ಒದಗಿದರೆ ಅವನು ಧನ್ಯನೇ ಸರಿ.

ಸಾಧುಸಜ್ಜನರೆಂಬ ಮಹಾತ್ಮರು ಈ ದೈವೀಸಂಪತ್‌ಪಕ್ಷದ ಅಪ್ಪಟ ಪ್ರತಿನಿಧಿ ಗಳೂ ನಾಯಕರೂ ಆಗಿರುತ್ತಾರೆ. ಅವರು ತಮ್ಮ ನಡೆನುಡಿಗಳಿಂದ, ಆದರ್ಶಗಳಿಂದ ಪ್ರತಿ ಕ್ಷಣದಲ್ಲಿಯೂ ಸಂಸಾರಿಗಳನ್ನು- ವಿರಕ್ತರಾಗುವಂತೆ, ಅಹಂಕಾರಿಗಳನ್ನು ನಿರ ಹಂಕಾರಿಗಳಾಗುವಂತೆ, ಕೃಪಣರನ್ನು- ಉದಾರಿಗಳಾಗುವಂತೆ, ಆಲಸ್ಯವುಳ್ಳವರನ್ನು ಕಾರ್ಯೋನ್ಮುಖರಾಗುವಂತೆ, ಅವಿದ್ಯಾವಂತರನ್ನು - ವಿದ್ಯಾವಂತರಾಗುವಂತೆ, ಸಮಾಜಘಾತುಕರನ್ನು ಸಮಾಜಸೇವಕರಾಗುವಂತೆ, ದೀನದಲಿತರನ್ನು-ನಾಗರಿಕರೂ ಸಂಸ್ಕೃತಿಸಂಪದ್ಭರಿತರೂ ಆಗುವಂತೆ ಪಕ್ಷಾಂತರಗೊಳಿಸುತ್ತಲೇ ಇರುವರು. ಇಂಥವರ ಸಂಖ್ಯೆಯು ಹೆಚ್ಚಿದಂತೆಲ್ಲ ನಾವು ಉದ್ಧಾರವಾಗುವೆವು.

# ಗ್ರಂಥಪರಿಚಯ

**ಶ್ರೀಮದ್ಭಗವದ್ಗೀತೆ :** (ಎಡ್ಡೀಳು ಭಾರತ-ಗ್ರಂಥದ ದ್ವಿತೀಯ ಭಾಗ) ಪೂಜ್ಯ ಸ್ವಾಮಿ ಶ್ರೀ ಚಿನ್ಮಯಾನಂದರು ಇಂಗ್ಲಿಷ್‌ನಲ್ಲಿ ಅನುಗ್ರಹಿಸಿದ ಭಾಷಣಗಳ ಕನ್ನಡ ಅನುವಾದ. ಅನುವಾದಕರು : ಶ್ರೀಮತಿ ಉಷಾ-ಸತ್ಯಾನಂದ ಮತ್ತು ಕುಮಾರಿ ಸುನಂದಾ ; ಪ್ರಕಾಶಕರು : ಚಿನ್ಮಯ ಮಿಷನ್, 16, ಸೇಂಟ್ ಜಾನ್ಸ್ ರೋಡ್, ಬೆಂಗಳೂರು-೪೨. ಗ್ರಂಥಪ್ರಕಾಶನಕ್ಕೆ ನೆರವಾದವರು : ಶ್ರೀ|| ಎಂ.ಜೆ. ಕೋದಂಡರಾಮಶೆಟ್ಟರು, ಧರ್ಮದೀಪ, ಚಿಕ್ಕಮಗಳೂರು. ಪುಟಗಳು : ಡೆಮ್ಮಿ ೧/೮ ೧೬೦ ; ಬೆಲೆ ?

ಈ ಗ್ರಂಥದಲ್ಲಿ ಸ್ವಾಮಿ ಶ್ರೀ ಚಿನ್ಮಯಾನಂದರವರ ಗೀತೋಪನ್ಯಾಸಗಳ ನಾಲ್ಕನೆಯ ಅಧ್ಯಾಯದಿಂದ ಆರನೆಯ ಅಧ್ಯಾಯದ ಪೂರ ವಿಷಯಗಳನ್ನು ಸಂಗ್ರಹಿಸಲಾಗಿದೆ. ಶ್ರೀ ಸ್ವಾಮಿಗಳು ವೇದಾಂತಪ್ರಪಂಚದಲ್ಲಿ ಅಂತರರಾಷ್ಟ್ರೀಯಖ್ಯಾತಿಯನ್ನು ಗಳಿಸಿರುವ ಮಹಾ ವಿದ್ವಾಂಸರು. ಅವರ ವಿಚಾರಸರಣಿ, ಸರಳವಾದ ಪ್ರತಿಪಾದನೆ, ಶ್ರೋತೃಗಳಮೇಲೆ ಬೀರುವ ಪ್ರತಿಭೆಗಳಿಂದ ಈ ಶತಮಾನದ ಗೀತಾಪ್ರಚಾರಕರಲ್ಲಿ ಅವರೊಂದು ಧ್ರುವತಾರೆಯಾಗಿದ್ದಾರೆ. ಅವರು ಏರ್ಪಡಿಸುವ ಗೀತಾಯಜ್ಞಗಳಂತೂ ಜಿಜ್ಞಾಸುಜನರ ಮನೆಮಾತಾಗಿರುವವು. ಇಂಥ ಮಹನೀಯರ ಮುಖಾರವಿಂದದಿಂದ ಹೊರಬಿದ್ದಿರುವ ಈ ಗೀತೋಪನ್ಯಾಸಗಳನ್ನು ಆಂಗ್ಲ ಭಾಷೆಯು ಬಾರದವರಿಗೂ ಅನುಕೂಲವಾಗಲೆಂದು ಅನುವಾದಕರು ತಿಳಿಗನ್ನಡದಲ್ಲಿ ಬರೆದು ಉಪಕಾರಮಾಡಿದ್ದಾರೆ. ಚಾತುರ್ವರ್ಣ್ಯಗಳ ವಿಷಯಕ್ಕೆ ಶ್ರೀ ಸ್ವಾಮಿಗಳು ನೀಡಿರುವ ವಿವರಣೆಯು (ಪುಟ 22, 23) ತುಂಬ ಸಮಂಜಸವಾಗಿದೆ. ಜಾತ್ಯಂಧರ ಕಣ್ಣನ್ನು ತೆರೆಯಿಸಿ ಪೂರ್ವಿಕರಾದ ಋಷಿಗಳ ಹೃದಯಾಂತರಾಳವನ್ನು ಇದು ಪ್ರಕಟಪಡಿಸುತ್ತದೆ. ಜಾತಿಯನ್ನು ದೂರುವವರು ಈ ಭಾಗವನ್ನು ಓದಬೇಕು. 'ಸ್ವಸಹಾಯಪದ್ಧತಿ' (ಪುಟ. 105, 106) ಎಂಬ ತಲೆಬರಹದಿಂದ ಕೂಡಿರುವ ಉಪನ್ಯಾಸವಂತೂ ನಮಗೆ ತುಂಬ ಮೆಚ್ಚಾಯಿತು. ಆದರೆ ಧ್ಯಾನಯೋಗವೆಂದರೆ ಭಾವನಾರೂಪವಾದ ಉಪಾಸನೆಗಿಂತ ಭಿನ್ನವಾದ ನಿದಿಧ್ಯಾಸನರೂಪವಾದ ವಸ್ತುತಂತ್ರವಾದ ಚಿಂತನ– ಎಂಬಿದನ್ನು ಇಲ್ಲಿ ಸ್ಪಷ್ಟಗೊಳಿಸಿದಂತೆ ಕಾಣಲಿಲ್ಲ. ಈ ಭಾಗಕ್ಕೆ ಶ್ರೀಶಂಕರಾಚಾರ್ಯರ ಅಭಿಪ್ರಾಯವೇನೋ ಹಾಗೆಯೇ ಇದೆ. ಅಂತೂ ಸಾಧಕರಿಗೆ ಉತ್ತಮ ಮಾರ್ಗದರ್ಶಕವಾದ ಗ್ರಂಥವಿದು.

**ಬ್ರಹ್ಮೋಪದೇಶಮು :** (ಶಾಂಕರಭಾಷ್ಯರಹಸ್ಯಸಮನ್ವಿತಮು) ಸಂಗ್ರಹಕರ್ತ : ಶ್ರೀ|| ಲಕ್ಷ್ಮೀಕಾಂತಶರ್ಮ. ಪ್ರಕಾಶಕುಲು : ಆಧ್ಯಾತ್ಮವಿಚಾರಸಂಘಮು, ರಾಯದುರ್ಗ. ಪುಟಗಳು : ಡೆಮ್ಮಿ ೩೮ ; ಬೆಲೆ ?

ಈ ತೆಲುಗು ಗ್ರಂಥದಲ್ಲಿ ಶ್ರೀಶ್ರೀಗಳವರು ಸಂಸ್ಕೃತಭಾಷೆಯಲ್ಲಿ ರಚಿಸಿರುವ 'ಬ್ರಹ್ಮವಿದ್ಯಾರಹಸ್ಯವಿವೃತಿಃ' ಎಂಬ ಗ್ರಂಥವನ್ನು ಆಧರಿಸಿ ಇಂದ್ರಪ್ರಜಾಪತಿಸಂವಾದರೂಪವಾದ ಬ್ರಹ್ಮವಿದ್ಯೆಯ ಉಪದೇಶವನ್ನು ಅಳವಡಿಸಲಾಗಿದೆ. ತೆಲುಗುಭಾಷೆಯನ್ನು ಬಲ್ಲವರು ಅವಶ್ಯವಾಗಿ ಓದಬೇಕಾದ ಗ್ರಂಥವಿದು.

**ಸಾದರಸ್ವೀಕಾರ : ಸಂಸ್ಕೃತ (ಭಾಷೆ ಮತ್ತು ಸಾಹಿತ್ಯ).**

# ದಿವಂಗತ ಮತ್ತೂರು ಲಕ್ಷ್ಮೀದೇವಮ್ಮನವರು

(ಸಮಿಾಪವರ್ತಿ)

ಅಧ್ಯಾತ್ಮಪ್ರಕಾಶಕಾರ್ಯಾಲಯದ ಬೆಂಗಳೂರು ಶಾಖೆಯಲ್ಲಿದ್ದು 'ಮಾತಾಜಿ' ಯವರೆಂತ ಜನಪ್ರಿಯರಾಗಿದ್ದ, ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳ ಅನುಗ್ರಹಪಾತ್ರರೂ ಆಪ್ತಸೇವಕಿಯೂ ಗುರುಭಕ್ತಿಸಂಪನ್ನರೂ ಆಗಿದ್ದ ಮತ್ತೂರು ಲಕ್ಷ್ಮೀದೇವಮ್ಮನವರು (ವಯಸ್ಸು 73) ತಾ|| 10-9-1979ನೇ ಸೋಮವಾರ ಬೆಂಗಳೂರಿನಲ್ಲಿ ಅವರ ತಮ್ಮಂದಿರು ಶ್ರೀ ಗಂಗಾಧರಶಾಸ್ತ್ರಿಗಳ ಮನೆಯಲ್ಲಿ ನಿಧನ ರಾದರೆಂತ ತಿಳಿಸಲು ವಿಷಾದಿಸುತ್ತೇನೆ. ಈ ಸಂದರ್ಭದಲ್ಲಿ ಶ್ರೀಮತಿಯವರ ಗುಣಗಾನರೂಪವಾದ ಈ ಲೇಖನವನ್ನು ಬರೆಯಲು ತಮ್ಮೆಲ್ಲರ ಅನುಮತಿಯನ್ನು ಬೇಡುತ್ತೇನೆ.

ಶ್ರೀಮತಿಯವರು ಶಿವಮೊಗ್ಗ ಜಿಲ್ಲಾ ಮತ್ತೂರು ಗ್ರಾಮದವರು. ಮತ್ತೂರು ಗ್ರಾಮವು ಸುಪ್ರಸಿದ್ಧ 'ಕೌಶಿಕಸಂಕೇತಿ'ಗಳೆಂಬ ಬ್ರಾಹ್ಮಣರ ಒಳಪಂಗಡದ ಮಹಾ ಜನರ ಆಶ್ರಯಸ್ಥಾನವು. 'ಬ್ರಾಹ್ಮಣರಲ್ಲಿ ಬ್ರಾಹ್ಮಣ'ರೆಂಬ ಲೋಕೋಕ್ತಿಗೆ ಅನು ಗುಣವಾಗಿ ಕೌಶಿಕಸಂಕೇತಿವಂಶದ ಮಹಾಜನರು ವೇದಶಾಸ್ತ್ರಾಧ್ಯಯನಸಂಪನ್ನರೂ ಜ್ಯೋತಿಷ-ಧರ್ಮಶಾಸ್ತ್ರ-ಆಯುರ್ವೇದ-ಸಂಗೀತಕಲಾನಿಪುಣರೂ ಹೌದು. ಶ್ರೌತ ಸ್ಮಾರ್ತಕರ್ಮಾನುಷ್ಠಾನಗಳು, ಮಡಿವಂತಿಕೆ, ಹಾಗೂ ಲೌಕಿಕವಾಗಿಯೂ ದೇಹ ಶಕ್ತಿ, ಅಡಿಕೆತೋಟಗಳ ವ್ಯವಸಾಯದಲ್ಲಿ ಸಿದ್ಧಹಸ್ತರಾದ ಈ ಮಹಾಜನರ ವರ್ಗದಲ್ಲಿ ವೇ|| ಚನ್ನಕೇಶವಶಾಸ್ತ್ರಿಗಳೆಂಬ ಧನಿಕರಾದ ಮಹಾವಿದ್ವಾಂಸರ ಪುತ್ರಿಯಾಗಿ ಶ್ರೀಮತಿಯವರು ಜನಿಸಿದರು. ತಂದೆಯವರು ಉದ್ದಾಮಸಂಸ್ಕೃತಪಂಡಿತರು. ಅವರು ಸಂಸ್ಕೃತಭಾಷೆಯಲ್ಲಿ ನಿರರ್ಗಲವಾಗಿ ಇತರರೊಡನೆ ಸಂಭಾಷಿಸುತ್ತಿದ್ದರು. ತಂದೆ ಯವರಿಂದಲೇ ಬಾಲ್ಯದಲ್ಲಿ ಶ್ರೀಮತಿಯವರಿಗೆ ವಿದ್ಯಾಭ್ಯಾಸವು ನಡೆಯಿತು. ಅಕ್ಷರ ವಿದ್ಯೆಯ ಜೊತೆಗೆ ಸಂಸ್ಕೃತಸಾಹಿತ್ಯ ಕಾವ್ಯ- ನಾಟಕಗಳವರೆಗೂ ವಿದ್ಯಾಭ್ಯಾಸವು ಆಯಿತು. ಅನಂತರ ಹಿಂದಿನಕಾಲದ ಪದ್ಧತಿಯಂತೆ ತೀರ ಚಿಕ್ಕವಯಸ್ಸಿನಲ್ಲಿಯೇ (ಕನ್ಯಾವಸ್ಥೆಯಲ್ಲಿಯೇ) ವಿವಾಹವು ನೆರವೇರಿತು. ಆದರೆ ವಿಧಿಸಂಕಲ್ಪವು ಬೇರೆ ಯಾಗಿದ್ದು ಶ್ರೀಮತಿಯವರು ಇನ್ನೂ ಪ್ರಾಪಂಚಿಕಸುಖದ ಮೆಟ್ಟಿಲನ್ನು ತುಳಿಯುವ ಮುಂಚೆಯೇ ಅವರನ್ನು 'ವಿಧವೆ'ಯನ್ನಾಗಿ ಮಾಡಿತು. ಪೂರ್ವಕಾಲದ ವರ್ಣಾ ಶ್ರಮಧರ್ಮದ ಕಟ್ಟುಪಾಡುಗಳು ಹಾಗೂ ವೈದಿಕಶ್ರೋತ್ರಿಯರ ಮನೆಯ ವಾತಾ ವರಣಕ್ಕೆ ತಕ್ಕಂತೆ ಶ್ರೀಮತಿಯವರು ಇನ್ನೂ ಜಗತ್ತು ಏನೆಂಬುದನ್ನೇ ಅರಿಯದ ಸ್ಥಿತಿಯಲ್ಲಿ 'ವಿಧವಾವ್ರತನಿಷ್ಠ'ರಾಗಿಬಿಟ್ಟರು. ಇವರ ಪವಿತ್ರವಾದ ಶೀಲಚಾರಿತ್ರ್ಯ ಗಳ ವಿಷಯಕ್ಕೆ ಇದಕ್ಕಿಂತ ಹೆಚ್ಚು ಹೇಳಲು ಬಾರದಾಗಿದೆ.

ಯೌವನವನ್ನೆಲ್ಲ ಇಂದ್ರಿಯನಿಗ್ರಹ, ವ್ರತನಿಷ್ಠೆಗಳಿಂದಲೇ ಸವೆಯಿಸಿದ ಶ್ರೀಮತಿಯವರು ಬಹುಕಾಲ ತಂದೆಯವರೊಡನೆಯೇ ಇದ್ದುಕೊಂಡು ಅವರ ಸೇವೆ,

ಮನೆಯಲ್ಲಿ ತಮ್ಮಂದಿರುಗಳ ಸಂಸಾರನಿರ್ವಹಣೆ–ಮುಂತಾದ ರೀತಿಯಿಂದ ಜೀವನವನ್ನು ಸಾರ್ಥಕಪಡಿಸಿಕೊಳ್ಳುತ್ತಿದ್ದರು. ಆಗಾಗ್ಗೆ ತಂದೆಯವರಿಂದಲೇ ಸದುಪದೇಶಗಳೂ ಅಧ್ಯಾತ್ಮದ ಅಭಿರುಚಿಯೂ ಒದಗುತ್ತಿತ್ತು. ತಾವೂ ಸ್ವತಃ ಗ್ರಂಥಾವಲೋಕನ, ಶ್ರವಣ, ಮನನ, ಧ್ಯಾನಾದಿಗಳ ಮೂಲಕ ಪಾರಮಾರ್ಥಿಕಜೀವನವನ್ನು ಸಾಗಿಸುತ್ತಾ ಪರಮಪುರುಷಾರ್ಥಸಾಧನೆಗೆ ಅಣಿಮಾಡಿಕೊಳ್ಳುತ್ತಿದ್ದರು. ಭಗವದನುಗ್ರಹದಿಂದಲೋ ಎಂಬಂತೆ ಇಂಥ ಮಹಿಳೆಗೆ ಶ್ರೀಶಂಕರಾಚಾರ್ಯರ ಅಪರಾವತಾರರೆನಿಸಿದ ಬ್ರಹ್ಮೀಭೂತ ಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರ ಸಾನ್ನಿಧ್ಯವು ಲಭಿಸಿತು.

ಶ್ರೀ ಸ್ವಾಮಿಗಳು 1948ರಲ್ಲಿ ತುರೀಯಾಶ್ರಮವನ್ನು ಸ್ವೀಕರಿಸಿದಾಗಿನಿಂದಲೂ ಹೆಚ್ಚು ವ್ರತನಿಷ್ಠರಾಗಿ ಆಚಾರಗಳನ್ನು ಚಾಚೂತಪ್ಪದೆ ಪಾಲಿಸುವವರಾಗಿದ್ದರು. 'ಮಡಿ'ಯನ್ನು ಆಚರಿಸುವ ವಿಷಯದಲ್ಲಿ ಶ್ರೀಗಳವರ ಜೀವಿತವು ಒಂದು ಪರಮಾದರ್ಶವಾಗಿದ್ದು ಸಾಮಾನ್ಯಗೃಹಸ್ಥರು ಅವರನ್ನು ಹಿಂಬಾಲಿಸುವಂತೆಯೇ ಇರಲಿಲ್ಲ. ಇಂಥ ಮಹನೀಯರಿಗೆ ಶ್ರೀಮತಿಯವರು ಸೇವಕಿಯಾಗಿ ದೊರೆತದ್ದು ಇಬ್ಬರಿಗೂ ಪೂರ್ಣ ಮನಸ್ತೃಪ್ತಿಯುಂಟುಮಾಡಿತು. ಜೊತೆಗೆ ಶ್ರೀಗಳವರಿಗೆ ಆಗ–ಎಂದರೆ ಶ್ರೀಮತಿಯವರು ಸೇವೆಗೆ ಒದಗಿದಾಗ ಎಪ್ಪತ್ತನ್ನು ಮೀರಿದ ವಯಸ್ಸಾಗಿದ್ದು-ದೈಹಿಕದೌರ್ಬಲ್ಯವನ್ನೂ ಲಕ್ಷಿಸದೆ ಸಂನ್ಯಾಸಧರ್ಮಕ್ಕನುಗುಣವಾದ ಎಲ್ಲಾ ಶಿಷ್ಟಾಚಾರಗಳನ್ನೂ ಅತ್ಯಂತ ಜಿಗುಟಾಗಿಯೇ ಪಾಲಿಸುತ್ತಿದ್ದುದ್ದರಿಂದ ಶ್ರೀಮತಿಯವರಂಥ ಶಿಷ್ಟಾಚಾರಪ್ರಿಯರು ಸೇವೆಗೆ ದೊರೆತದ್ದು ಅವರಿಗೆ ತುಂಬ ಸಂತೋಷವನ್ನುಂಟುಮಾಡಿತ್ತು. ಶ್ರೀಗಳವರೊಡನೆ ವ್ಯವಹರಿಸುವದು ಕತ್ತಿಯ ಅಲುಗಿನ ಮೇಲೆ ನಡೆಯುವದಕ್ಕಿಂತ ಸುಲಭವೇನೂ ಆಗಿರಲಿಲ್ಲ. ಜೊತೆಗೆ ಶ್ರೀಗಳವರು ಕಾರ್ಯಾಲಯದ ವ್ಯವಹಾರಗಳನ್ನು ನಿರ್ವಹಿಸುತ್ತಿದ್ದರಾದ್ದರಿಂದ ಪ್ರತಿದಿನ ಅವರಿಗೆ ಮೂರುಬಾರಿ ಸ್ನಾನ, ಆಹ್ನಿಕಸಿದ್ಧತೆ, ಭಿಕ್ಷೆ, ವಿಶ್ರಾಂತಿಗಳಿಗೂ, ಉಳಿದ ಸಮಯದಲ್ಲಿ ಬರವಣಿಗೆ ಮುಂತಾದದ್ದಕ್ಕೂ ಯಾರಾದರೊಬ್ಬರು ಸಮೀಪದಲ್ಲಿಯೇ ಇದ್ದು ಸೇವೆಮಾಡುವವರು ಅಗತ್ಯವಾಗಿದ್ದು ಶ್ರೀಮತಿಯವರು ಈ ಎಲ್ಲಾ ಅವಶ್ಯಕತೆಗಳನ್ನೂ ಗುರುಗಳಿಗೆ ಅಚ್ಚುಮೆಚ್ಚಾಗಿ ನಿರ್ವಹಿಸುತ್ತಿದ್ದರು. ಶ್ರೀ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಉಪಾಸನೆ ಎಂದರೇನು ? ಎಂಬಿದನ್ನು ವಿವರಿಸುವಾಗ 'ಗುರುಮುಪಾಸ್ತೇ' ಎಂದು ಪ್ರಸಿದ್ಧವಾಗಿರುವ ಉದಾಹರಣೆಯನ್ನು ನೀಡಿದ್ದಾರೆ. ಅದನ್ನು ಈಗಿನ ಕಾಲಕ್ಕೆ ಪ್ರತ್ಯಕ್ಷವಾಗಿ ಕಾಣಬೇಕಾಗಿದ್ದರೆ ಅದು ಶ್ರೀ ಲಕ್ಷ್ಮಮ್ಮನವರಲ್ಲಿ ಮಾತ್ರ– ಎಂದು ನಾನು ಧಾರಾಳವಾಗಿ ಹೇಳಬಲ್ಲೆನು.

1953ನೇ ವರ್ಷದಿಂದ ಬಹಳಮಟ್ಟಿಗೆ ಶ್ರೀಶ್ರೀಗಳವರು ಕೈಗೊಂಡಪ್ರವಾಸಗಳಲ್ಲೆಲ್ಲ ದಿ॥ ಲಕ್ಷ್ಮೀದೇವಮ್ಮನವರು ಜೊತೆಯಲ್ಲಿಯೇ ಇರುತ್ತಿದ್ದರು. ಗುರುಗಳವರ ಚಾತುರ್ಮಾಸ್ಯ ಪ್ರವಾಸಗಳು, ಉತ್ತರ, ದಕ್ಷಿಣಭಾರತದ ಸಂಚಾರಗಳು, ಕಾಶೀಯಾತ್ರೆ–ಮುಂತಾದ ಸಂದರ್ಭಗಳಲ್ಲಿ ತಿಂಗಳುಗಟ್ಟಲೆ ಗುರುಗಳೊಡನೆ ಅವರ

ಪರಿವಾರದವರನ್ನೂ ಸಂತೈಸಿ ಪರಸ್ಥಳಗಳಲ್ಲಿ ಒದಗಿದ ನಾನಾವಿಧವಾದ ಸನ್ನಿವೇಶಗಳಲ್ಲಿಯೂ ಗುರುಗಳೊಡನೆ ಹೊಂದಿಕೊಂಡು ಜೊತೆಯಲ್ಲಿರುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಪತ್ರವ್ಯವಹಾರ, ಹಣಕಾಸಿನ ಲೆಕ್ಕಾಚಾರ, ಉಪನ್ಯಾಸಗಳ ಟಿಪ್ಪಣಿಯನ್ನು ಸಂಗ್ರಹಿಸುವದೇ ಮುಂತಾದ ಕೆಲಸಗಳನ್ನೂ ಪರಸ್ಥಲಗಳಲ್ಲಿ ನಿರ್ವಹಿಸುತ್ತಿದ್ದರು. ಹೆಚ್ಚುಕಾಲ ಹೊಳೆನರಸೀಪುರದಲ್ಲಿರುವಾಗ ಗುರುಗಳ ದರ್ಶನಕ್ಕಾಗಿ ಬಂದವರಿಗೂ ಊಟೋಪಚಾರಗಳನ್ನು ನಡೆಯಿಸುವದು, ಅನುಷ್ಠಾನಗಳಲ್ಲಿ ಭಾಗವನ್ನು ವಹಿಸಿ ಭಜನೆ ಮಾಡುವದು, ಕೀರ್ತನೆಗಳನ್ನು ಹಾಡುವದು, ಉಪನ್ಯಾಸ, ಪುರಾಣಗಳ ಶ್ರವಣ– ಹೀಗೆ ಸದಾ ಸತ್ಕಾಲಕ್ಷೇಪದಲ್ಲಿರುತ್ತಿದ್ದರು. ಗುರುಗಳು ಕೆಲವುವೇಳೆ ವಿಶೇಷವಾಗಿ ಶ್ರೀಮತಿಯವರಿಗಾಗಿಯೇ ವೇದಾಂತಪಾಠಗಳನ್ನು ನಡೆಯಿಸಿದ್ದೂ ಉಂಟು. ಆದರೆ ಯಾವಾಗಲೂ ಬರವಣಿಗೆಯಲ್ಲೇ ಗಂಟೆಗಟ್ಟಲೆ ತಲ್ಲೀನರಾಗಿರುತ್ತಿದ್ದ ಗುರುಗಳು ಶ್ರೀಮತಿಯವರಿಗಾಗಿ ಹೆಚ್ಚುಕಾಲವನ್ನು ವಿನಿಯೋಗಿಸುತ್ತಿರಲಿಲ್ಲ. ಬಹಳವಾಗಿ ಕೆಲಸಮಾಡಿ ಗುರುಗಳು ಶಾರೀರಕವಾಗಿ ಸೋತಂತೆ ಕಂಡಾಗ ಒತ್ತಾಯವಾಗಿ ಶ್ರೀ ಲಕ್ಷಮ್ಮನವರು ಶ್ರೀಗಳ ಬರಹಸಾಮಗ್ರಿಗಳನ್ನು ಪ್ರೇಮದಿಂದಲೇ ಕಿತ್ತು ತೆಗೆದಿಡುತ್ತಿದ್ದುದೂ ಉಂಟು. ಹೀಗೆ ಕಾರ್ಯಭಾರದಿಂದ ತಮ್ಮನ್ನು ತಾವೇ ಮರೆಯುತ್ತಿದ್ದ ಶ್ರೀಗಳಿಗೆ ಕಾಲಕಾಲಕ್ಕೆ ಆಹಾರ ಪಾನೀಯಗಳನ್ನೂ ಉಪಚಾರಗಳನ್ನೂ ಒದಗಿಸಿ ತಾಯಿಯು ಮಗುವನ್ನು ಸಾಕುವಂತೆ ಗುರುಗಳನ್ನು ಸಲಹಿದ ಶ್ರೀ ಲಕ್ಷಮ್ಮನವರು ಶ್ರೀಗಳವರಿಗೆ ಪೂರ್ವಜನ್ಮದಲ್ಲಿ ತಾಯಿಯಾಗಿದ್ದಿರಬಹುದು– ಎನಿಸುತ್ತಿತ್ತು.

ಹೀಗೆಯೇ ಶ್ರೀಮತಿಯವರ ಸೇವಾವೃತ್ತಿಯ ತಪಸ್ಸು ನಡೆಯುತ್ತಿರುವಾಗ ಒಂದು ಪರೀಕ್ಷಾಕಾಲವೂ ಒದಗಿತು. 1967ರಲ್ಲಿ ಗುರುಗಳು ಶಾರೀರಕ ತೊಂದರೆಗೆ ಈಡಾಗಿ ಸುಮಾರು ಎರಡುತಿಂಗಳ ಕಾಲ ಆಸ್ಪತ್ರೆಯಲ್ಲಿದ್ದು ಆಪರೇಷನ್ ಚಿಕಿತ್ಸೆಗೆ ಒಳಗಾದಾಗಲಂತೂ ಶ್ರೀ ಲಕ್ಷಮ್ಮನವರ ಸೇವಾ ಶುಶ್ರೂಷೆಗಳು ಪರಾಕಾಷ್ಠೆಯನ್ನು ಮುಟ್ಟಿದವು. ತಮ್ಮ ವೈಯಕ್ತಿಕ ಆಹಾರ–ನಿದ್ರೆಗಳ ಪರಿವೆಯಾಗಲಿ, ರೋಗಿಯ ವಿಷಯಕ್ಕೆ ಜುಗುಪ್ಸೆಯಾಗಲಿ ಇಲ್ಲದೆ–ಅಹರ್ನಿಶಿ ಸೇವೆಸಲ್ಲಿಸಿದ ಶ್ರೀಮತಿಯವರು ಪುನರ್ಜನ್ಮವನ್ನು ಪಡೆದ ಶ್ರೀಗಳವರನ್ನು ಭಕ್ತರ ಭಾಗ್ಯದ ಫಲವಾಗಿ ಬದುಕಿಸಿಕೊಂಡರು. ವಯಸ್ಸಾದಂತೆಲ್ಲ ಸೇವಾಕಾರ್ಯದಲ್ಲಿ ಹೆಚ್ಚುಹೆಚ್ಚಿನ ಕಷ್ಟಗಳು ಸಂಭವಿಸಿದಾಗ್ಯೂ ಅವುಗಳನ್ನೆಲ್ಲ ದಾಟಿಕೊಂಡು ಗುರುಸೇವೆಯಲ್ಲಿ ಇನ್ನೂ ಹೆಚ್ಚಿನ ನಿಷ್ಠೆಯನ್ನೇ ಕಾಪಾಡಿಕೊಂಡರು. 1969ರ ಕಡೆಯ ಭಾಗದಲ್ಲಿ ಶಾಶ್ವತವಾಗಿ ನೆಲಸಲು ಶ್ರೀಗಳವರು ಬೆಂಗಳೂರಿಗೆ ಬಂದಾಗ ಸಂಪೂರ್ಣವಾಗಿ ಶ್ರೀ ಲಕ್ಷಮ್ಮನವರೇ ಶ್ರೀಗಳವರಿಗೆ ದಿಕ್ಕಾದರು. ಅಲ್ಲಿಂದ ಮುಂದೆ ಶ್ರೀಶ್ರೀಗಳವರ ಸಾನ್ನಿಧ್ಯದಲ್ಲಿ ನಡೆದ ಶಾಖಾಕಾರ್ಯಾಲಯದ ಪುರೋಭಿವೃದ್ಧಿಯಲ್ಲೆಲ್ಲ ಶ್ರೀಮತಿಯವರೇ ಸೂತ್ರಧಾರಿಗಳಾಗಿದ್ದರೆಂದರೂ ತಪ್ಪಾಗಲಾರದು. ಗುರುಗಳ ಬಳಿಗೆ ಬಂದವರನ್ನೆಲ್ಲ ಆದರಿಸಿ

ಪ್ರೀತಿಯನ್ನು ಬೆಳೆಸಿ ಕಾರ್ಯಾಲಯಕ್ಕೆ ಯಾರುಯಾರಿಂದ ಏನೇನು ಪ್ರಯೋಜನಗಳಾಗಬೇಕೋ ಎಲ್ಲಕ್ಕೂ ಶ್ರೀಮತಿಯವರು ನೇರಾಗಿ ಅಥವಾ ಪರಂಪರೆಯಿಂದ ಕಾರಣರಾಗಿರುತ್ತಿದ್ದರು. ವಿದ್ಯಾರ್ಥಿಗಳಿಗಂತೂ ಹಡೆದ ತಾಯಿಗಿಂತಲೂ ಹೆಚ್ಚಾದ ಮಮತೆಯನ್ನೇ ಧಾರೆಯೆರೆದು ಪೋಷಿಸಿ ಪ್ರೋತ್ಸಾಹಿಸುತ್ತಿದ್ದರು.

1972ರಲ್ಲಿ ಶಾಖಾಕಾರ್ಯಾಲಯದ ಸ್ವಂತ ಕಟ್ಟಡವು ಸಿದ್ಧವಾಗಿ ಅಲ್ಲಿಯೇ ಗುರುಗಳು ನೆಲಸಿದ ಅನಂತರ ಶ್ರೀಮತಿಯವರು ಸಂಪೂರ್ಣವಾಗಿ ತಮ್ಮನ್ನು ಕಾರ್ಯಾಲಯದ ಸೇವೆಗೇ ಸಮರ್ಪಿಸಿಕೊಂಡುಬಿಟ್ಟರು. ಮುಂದೆ 1974ರಲ್ಲಿ ದೊಡ್ಡ ಸಭಾಂಗಣ ಸಮೇತವಾದ ಸಂಪೂರ್ಣ ಕಟ್ಟಡವೂ ಉಳಿದ ಸೌಕರ್ಯಗಳೂ ಸಜ್ಜಾಗುವ ವೇಳೆಗೆ ಶ್ರೀಶ್ರೀಗಳವರು ತುಂಬ ಬಳಲಿದ್ದರು. ಇದು ಶ್ರೀಮತಿಯವರಿಗೆ ಅತೀವ ದುಃಖವನ್ನುಂಟುಮಾಡಿತ್ತು. ಜೀವನವನ್ನೆಲ್ಲ ಕಾರ್ಯಾಲಯದ ಏಳಿಗೆಗಾಗಿ ಶ್ರಮಿಸಿದ ಶ್ರೀಗಳವರು ಕೆಲವು ಕಾಲವಾದರೂ ಹೊಸಕಟ್ಟಡದಲ್ಲಿ ಪ್ರವಚನಾದಿಗಳನ್ನು ನಡೆಯಿಸಲಿಲ್ಲವಲ್ಲ! ಎಂಬ ಕೊರಗು ಅವರಿಗಿತ್ತು. ಗುರುಗಳು ಮುಂದೆ ತುಂಬ ಅಸ್ವಸ್ಥರಾಗಿ ಹಾಸಿಗೆ ಹಿಡಿದಾಗ ಶ್ರೀಮತಿಯವರು ಹೃದಯದಲ್ಲಿನ ನೋವನ್ನು ಸಹಿಸಿಕೊಂಡು ಬಹಳವಾಗಿ ಸೇವೆಯನ್ನು ಮಾಡಿದರು. ಆದರೂ 1975ರಲ್ಲಿ ಗುರುಗಳು ಬ್ರಹ್ಮೀಭೂತರಾದಾಗ ಶ್ರೀಮತಿಯವರಿಗೆ ಅವರ ತಂದೆ ತಾಯಿಗಳನ್ನು ಕಳೆದುಕೊಂಡದ್ದಕ್ಕಿಂತಲೂ ಹೆಚ್ಚು ದುಃಖವಾಗಿತ್ತು. 'ಸೇವಾಧರ್ಮಃ ಪರಮಗಹನೋ ಯೋಗಿನಾಮಪ್ಯಗಮ್ಯಃ' ಎಂಬ ಭರ್ತೃಹರಿಯ ವಾಕ್ಯವು ತಿಳಿಸುವಂತೆ ಯಾರೇ ಆಗಲಿ, ಪ್ರಭುಸೇವೆ, ಗುರುಸೇವೆ, ಜನಸೇವೆಗಳಲ್ಲಿ ಉತ್ತೀರ್ಣರಾಗಬೇಕಾದರೆ ಬಹಳವಾದ ತ್ಯಾಗವೂ, ಕ್ಷಮೆಯೂ, ಪ್ರೇಮವೂ ಅವಶ್ಯಕವಾಗಿರುತ್ತದೆ. ಶ್ರೀಮತಿಯವರು ಇಂಥ ಸದ್ಗುಣಗಳ ಗನಿಯಾಗಿದ್ದರು.

ಮುಂದೆ ಶ್ರೀಮತಿಯವರು ತಮ್ಮ ಸಂಪೂರ್ಣಜೀವಿತಕಾಲವೂ ಕಾರ್ಯಾಲಯದಲ್ಲಿಯೇ ಉಳಿದು ಗುರುಗಳ ಆರಾಧನೆ, ಶಂಕರಸಪ್ತಾಹಾದಿ ಉತ್ಸವಗಳಲ್ಲಿ ಯಶಸ್ವಿಯಾಗಿ ಕಾರ್ಯಭಾರಗಳನ್ನು ನಿರ್ವಹಿಸಿದರು. ಅವರು ಯಾವಾಗಲೂ ಸಂಸ್ಥೆಗೆ ಭಾರವಾಗಿರಲಿಲ್ಲ. ತಮ್ಮ ಹೊಟ್ಟೆಯ ಖರ್ಚುವೆಚ್ಚಗಳನ್ನು ಪ್ರತಿವರ್ಷವೂ ಕಾಣಿಕೆಯ ರೂಪದಲ್ಲಿ, ಹಾಗೂ ಪದಾರ್ಥಗಳ ರೂಪದಲ್ಲಿ ಸಂಸ್ಥೆಗೆ ಅರ್ಪಿಸಿಬಿಡುತ್ತಿದ್ದರು. ಸಂಸ್ಥೆಯನ್ನು ಅತ್ಯಂತ ಜವಾಬ್ದಾರಿಯಿಂದ ಕಾಪಾಡಿಕೊಂಡಿದ್ದರು. ಗ್ರಂಥ ಪ್ರಕಾಶನಕ್ಕೆ ಆಗಾಗ್ಗೆ ಧನಸಹಾಯವನ್ನು ನೀಡುತ್ತಿದ್ದರು. ಹೀಗೆ ಸರ್ವವಿಧದಿಂದಲೂ ಸಂಸ್ಥೆಗೂ, ಸಂಸ್ಥಾಪಕರಾದ ಶ್ರೀಗಳವರಿಗೂ ತಾಯಿಯಾಗಿದ್ದ ಲಕ್ಷ್ಮಮ್ಮನವರು ಇಲ್ಲವಾದುದು ನಮಗೆ ಶ್ರೀಗಳವರ ನಿಧನದಷ್ಟೇ ದುಃಖವುಂಟುಮಾಡಿದೆ. ಇಂಥ ಪರೋಪಕಾರಿಗಳಾದ ದಿವಂಗತ ಲಕ್ಷ್ಮಮ್ಮನವರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸಿ ಆಕೆಯ ಆದರ್ಶಗಳು ನಮಗೆಲ್ಲ ದಾರಿದೀಪವಾಗಲೆಂದು ಗುರುಗಳಲ್ಲಿ ಬೇಡುತ್ತಾ ಈ ಗುಣಗಾನದಿಂದ ವಿರಮಿಸುತ್ತೇನೆ.

——————

# ಪುರುಷಸೂಕ್ತ-೨

(ಅಧ್ಯಾತ್ಮವಿದ್ಯಾಪ್ರವೀಣ ವೇ|| ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು)

ಹಿಂದಿನ ಲೇಖನದಲ್ಲಿ ಪುರುಷಸೂಕ್ತದ ಮುಖಪರಿಚಯವನ್ನು ಮಾಡಿಕೊಡಲಾಗಿದೆ. ಈಗ ಪುರುಷಸೂಕ್ತದ ಒಳತತ್ತ್ವವನ್ನು ಕುರಿತು ಚಿಂತಿಸೋಣ.

ಪುರುಷಸೂಕ್ತದಲ್ಲಿ ಪ್ರಧಾನವಾಗಿ 'ವಿಶ್ವವೆಲ್ಲವೂ ಪುರುಷನೇ' ಎಂಬ ಸಿದ್ಧಾಂತವು ಪ್ರತಿಪಾದಿಸಲ್ಪಟ್ಟಿದೆ. ಮುಂಡಕೋಪನಿಷತ್ತಿನಲ್ಲಿಯೂ "ಪುರುಷ ಏವೇದಂ ವಿಶ್ವಮ್" ಎಂದು ತಿಳಿಸಿರುತ್ತದೆ. ಹಾಗೆಯೇ ಪುರುಷನಿಂದಲೇ ಎಲ್ಲವೂ ಹುಟ್ಟಿಬಂದಿರುತ್ತವೆಯೆಂದೂ ಎಲ್ಲವನ್ನೂ ವ್ಯಾಪಿಸಿಕೊಂಡಿರುವ ಪುರುಷನು ವಿಶ್ವರೂಪನಾಗಿರುತ್ತಾನೆಂದೂ ತಿಳಿಸಿರುತ್ತದೆ. ಆದ್ದರಿಂದ ಪುರುಷಸೂಕ್ತಕ್ಕೂ ಮುಂಡಕೋಪನಿಷತ್ತಿಗೂ ಕೆಲವು ಅಂಶಗಳಲ್ಲಿ ಹೋಲಿಕೆಯಿದೆ- ಎನ್ನಬಹುದು. ಅಂತೂ ಪುರುಷತತ್ತ್ವ, ವಿಶ್ವತತ್ತ್ವಗಳನ್ನೂ ಪುರುಷನು ನಾರಾಯಣನೇ- ಎಂಬಿದನ್ನೂ ನಾರಾಯಣ ಎಂಬ ತತ್ತ್ವದ ವಿವರವನ್ನೂ ವಿಚಾರಮಾಡಿದಲ್ಲಿ ಪುರುಷಸೂಕ್ತದ ತಾತ್ಪರ್ಯದಲ್ಲಿ ನೆಲೆನಿಲ್ಲಬಹುದಾಗಿದೆ.

ವಿಶ್ವವೆಂದರೇನು ? ಎಂಬಿದನ್ನು ವಿಚಾರಮಾಡೋಣ. ವಿಶ್ವವು ಪ್ರಕೃತಿಮಯವಾಗಿರುವದು ಪ್ರಸಿದ್ಧವು. ಈ ಪ್ರಕೃತಿಯು ಆಧ್ಯಾತ್ಮಿಕಾದಿ ವಿಭಾಗಗಳಿಂದ ಕೂಡಿರುವದು. ಪ್ರಕೃತಿಯ ಗುಣಗಳಾದ ಸತ್ತ್ವರಜಸ್ತಮಸ್ಸುಗಳೇ ವಿಶ್ವದ ಮೂಲರೂಪವು- ಎಂದು ನಮಗೆ ಶಾಸ್ತ್ರಗಳು ತಿಳಿಸುತ್ತವೆ. ಪುರಾಣಗಳಂತೂ ತ್ರಿಗುಣಗಳ ವಿಕಾರ-ವ್ಯಾಪಾರಗಳಿಂದಲೇ ಈ ಸ್ಥೂಲವಿಶ್ವದ ಆವಿರ್ಭಾವವಾಗಿರುವದನ್ನು ವಿಸ್ತಾರವಾಗಿ ವರ್ಣಿಸಿವೆ. ಆದರೆ ಪ್ರಕೃತಿಯು ತಾನಾಗಿಯೇ ವ್ಯಾಪಾರಮಾಡುವದಿಲ್ಲ. ಅದು ಜಡವು. ಆದ್ದರಿಂದ ಚೇತನನಾದ ಪುರುಷನು ಅದಕ್ಕೆ ಪ್ರೇರಕನಾಗಿದ್ದು ವ್ಯಾಪಾರಮಾಡಿಸುವನು. ಈ ರೀತಿಯಾಗಿ ಪ್ರಕೃತಿಯ ದ್ವಾರದಿಂದ ಭಗವಂತನು ಜಗತ್ಕಾರಣನಾಗಿರುತ್ತಾನೆ-ಎಂದು ಭಗವದ್ಗೀತೆಯಲ್ಲಿಯೂ ಪ್ರತಿಪಾದಿಸಿದೆ. ಆದರೆ ಈ ಪ್ರಕೃತಿಯು ಅವಿದ್ಯಾಕಲ್ಪಿತವೆಂಬುದನ್ನು ಮರೆಯಬಾರದು. ಪ್ರಕೃತಿಯಿಂದ ಹೊರಬಿದ್ದಿರುವ ವಿಚಿತ್ರವಾದ ವಿಶ್ವವು ಸ್ವರೂಪದಿಂದ ಭಗವಂತನೇ ಆಗಿಯೂ ತೋರಿಕೆಯ ರೂಪದಿಂದ ಜಗತ್ತಾಗಿಯೂ ಇದ್ದುಕೊಂಡಿದೆ. ಇದನ್ನೇ ಉಪನಿಷತ್ತಿನಲ್ಲಿ 'ಪುರುಷನೇ ವಿಶ್ವವಾಗಿರುತ್ತಾನೆ'- ಎಂದು ಹೇಳಿದೆ. ಆದ್ದರಿಂದ ವಿಶ್ವತತ್ತ್ವವು ನಿಜವಾಗಿ ಪುರುಷನೇ ಆಗಿದೆ-ಎಂದರೆ ವಿಶ್ವರೂಪನಾದ ಪುರುಷನು ವಿರಾಡ್ರೂಪನೂ ಜಗತ್ತಿಗೆ ಅಂತರ್ಯಾಮಿಯೂ ಆಗಿದ್ದುಕೊಂಡಿರುವನು. ಪುರುಷಸೂಕ್ತದಲ್ಲಿ ಈ ವಿಷಯವನ್ನು ಕುರಿತು ಪ್ರತಿಪಾದಿಸಲಾಗಿದೆ.

ಈಗ ಪುರುಷನ ವಿಶ್ವರೂಪವನ್ನು ವಿಚಾರಮಾಡೋಣ. ವಿಶ್ವರೂಪಶಬ್ದಕ್ಕೆ ನಾನಾರ್ಥಗಳಿವೆ. ಹೇಗೆಂದರೆ: (೧) ದೊಡ್ಡದಾದ ರೂಪವನ್ನು ಕೆಲವುವೇಳೆ ವಿಶ್ವ

ರೂಪವೆನ್ನುವರು. ಉದಾಹರಣೆಗೆ ಸೀತಾದೇವಿಗೆ ಆಂಜನೇಯನು ತೋರಿಸಿದ ತನ್ನ ದೊಡ್ಡರೂಪ. (೨) ಜಗತ್ತನ್ನೆಲ್ಲ ವ್ಯಾಪಿಸುವಂಥ ರೂಪವೆಂದೂ ಅರ್ಥಮಾಡ ಬಹುದು. ಉದಾಹರಣೆಗೆ ವಾಮನನು ತ್ರಿವಿಕ್ರಮನಾದದ್ದು. ಸೂರ್ಯನು ತನ್ನ ಪ್ರಕಾಶರೂಪದಿಂದ ಜಗತ್ತನ್ನೆಲ್ಲ ಬೆಳಗುವದು-ಇತ್ಯಾದಿ. (೩) ವಿಶ್ವಾಧಿಷ್ಠಾನರೂಪ ವೂ ವಿಶ್ವರೂಪವೆನಿಸುವದು. ಇದು ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯ ದಲ್ಲಿ ವಿವರಿಸಲ್ಪಟ್ಟದೆ. (೪) ವಿಶ್ವಗುಣರೂಪವೂ ವಿಭೂತಿರೂಪವೂ ವಿಶ್ವರೂಪ ವಾಗಬಲ್ಲದು. ನೀರಿನಲ್ಲಿರುವ ರಸಗುಣ, ಚಂದ್ರಸೂರ್ಯರ ಪ್ರಭೆ, ಮನುಷ್ಯರಲ್ಲಿರುವ ಪೌರುಷ, ಬುದ್ಧಿವಂತರ ಬುದ್ಧಿಗುಣ- ಇತ್ಯಾದಿ ಗೀತೆಯ ಏಳು ಮತ್ತು ಹತ್ತನೆಯ ಅಧ್ಯಾಯದಲ್ಲಿ ನಿರೂಪಿಸಲ್ಪಟ್ಟಿರುವದು. (೫) ಹೀಗೆಯೇ ವಿಶ್ವಾಂತರ್ಯಾಮಿರೂಪ ವನ್ನೂ ವಿಶ್ವರೂಪವೆನ್ನಬಹುದು. ಮಣಿಗಳೆಲ್ಲವೂ ದಾರದಲ್ಲಿ ಪೋಣಿಸಲ್ಪಟ್ಟಿರು ವಂತೆ ಎಂಬಿದೇ ಇದಕ್ಕೆ ಉದಾಹರಣೆಯು. ಈ ಎಲ್ಲಾ ಅರ್ಥಗಳೂ ನಿಜವೇ ಆಗಿರುತ್ತವೆ. ಆದ್ದರಿಂದ ವಿಶ್ವರೂಪನೂ ವಿಶ್ವಾಂತರ್ಯಾಮಿಯೂ, ವಿಶ್ವಮಯನೂ ವಿಶ್ವಪ್ರಮಾಣನೂ ವಿಶ್ವವ್ಯಾಪಕನೂ ಆಗಿರುವ ನಾರಾಯಣನು ವಿಶ್ವಮ್-ವಿಷ್ಣುಃ ಎಂದು ಸ್ತುತಿಸಿರುವಂತೆ ವಿಶ್ವವೆಂಬ ನಾಮಧೇಯವುಳ್ಳವನಾಗಿರುತ್ತಾನೆ-ಎಂದು ಮನನಮಾಡಿಕೊಳ್ಳಬೇಕಾಗಿರುತ್ತದೆ.

ವಿಶ್ವರೂಪನಾದ ಈ ಪರಮಾತ್ಮನೇ ಅನಂತನಾಗಿರುವನು. ವಿಶ್ವವು ದೊಡ್ಡ ದೇನೋ ನಿಜ. ಆದರೆ ಅದು ತಾನು ತೋರುತ್ತಿರುವ ರೂಪದಿಂದ ಅನಂತವಾಗ ಲಾರದು. ಏಕೆಂದರೆ ನಾಮರೂಪಗಳಿಗೆ ಬದ್ಧವಾಗಿರುವ ವಿಶ್ವವು ಅನಂತವಾಗಲು (ಅಂತವಿಲ್ಲದ್ದು) ಸಾಧ್ಯವಿಲ್ಲ. ಆದ್ದರಿಂದ ದೇಶ-ಕಾಲ-ವಸ್ತು-ಅವಸ್ಥೆ-ಗುಣ ಮೊದಲಾದ ಪರಿಮಿತಿಗಳು ವಿಶ್ವವನ್ನು ಅಂತವುಳ್ಳದ್ದಾಗಿ ಮಾಡಿರುವವು. ಆದ್ದರಿಂದ ವಿಶ್ವವೇ ದೇವರಾದಾಗ ದೇವರೂ ಅನಂತನಲ್ಲದೆ ಹೋದಾನೆ ? ಎಂಬ ಸಂಶಯವು ಕೆಲವರಿಗೆ ಬರಲಿದೆ. ಅದಕ್ಕೆ ಉತ್ತರವೇನೆಂದರೆ : ದೇವರೆಂಬುವನು ತಾನು ತೋರಿ ಕೊಳ್ಳುತ್ತಿರುವ ರೂಪದಿಂದ ಪರಿಚ್ಛಿನ್ನನಾದಂತೆ ಕಂಡುಬರುತ್ತಾನೆ ; ನಿಜ. ಆದರೆ ಸ್ವರೂಪದಿಂದ ಅನಂತನೇ ಆಗಿದ್ದಾನೆ. ಹೇಗೆ ಆಕಾಶವು ಮನೆ, ವರಾಂಡ, ಕೋಣೆ, ಗೋಡೆಬೀರು- ಮುಂತಾದ ರೀತಿಯಿಂದ ಪರಿಚ್ಛಿನ್ನವಾಗಿದ್ದಂತೆ ಕಂಡುಬರುವದೋ ನಿಜವಾಗಿ ಹಾಗೆ ತುಂಡಾಗಿಲ್ಲವೋ ಹಾಗೆಯೇ ಆಕಾಶಕ್ಕೂ ಆತ್ಮನಾದ ನಿರ್ವಿಶೇಷ ನಿರ್ಗುಣನಿರಾಕಾರನಾದ ದೇವರು ಎಂದೆಂದಿಗೂ ಸ್ವರೂಪದಿಂದ ಅಪರಿಚ್ಛಿನ್ನನೇ ಆಗಿರುವನು. ಕಲ್ಪಿತರೂಪದಿಂದಲಾದರೋ ಪರಿಚ್ಛಿನ್ನನಂತೆ ತೋರುತ್ತಾ ಎಲ್ಲವನ್ನೂ ಅಂತರ್ಯಾಮಿರೂಪದಿಂದಲೂ ವ್ಯಾಪಿಸಿಕೊಂಡಿರುವನು. ಹೀಗೆ ದೇವರು ವಿಶ್ವವೂ ಅನಂತನೂ ಆಗಿರುವದು ಅಸಮಂಜಸವೇನೂ ಅಲ್ಲ. ಭಗವಂತನನ್ನು ನಾವು ಯಾವ ಹೆಸರಿನಿಂದ ಕರೆದು ಏನೇನು ಗುಣಗಳನ್ನು ಹೇಳಿದರೂ ಅವು ಅವನ ಸ್ವರೂಪದಲ್ಲಿ ಮಾಡಿರುವ ಅಧ್ಯಾರೋಪಮಾತ್ರವಾಗಿರುತ್ತವೆ. ಆದ್ದರಿಂದ ವಿಶ್ವವೆಲ್ಲವೂ ಭಗವಂತ

ನಲ್ಲಿಯೇ ತೋರುತ್ತಿದ್ದರೂ ಅದರ ಗುಣದೋಷಗಳೇನೂ ಆತನಿಗೆ ಅಂಟಿರುವದಿಲ್ಲ ವಾಗಿ ಅವನ ಅನಂತತ್ವಕ್ಕೆ ಹಾನಿಯಿರುವದಿಲ್ಲ.

ಈಗ ಪುರುಷತತ್ತ್ವವನ್ನು ವಿಚಾರಮಾಡಬಹುದಾಗಿದೆ. ಪುರುಷಶಬ್ದದ ಅರ್ಥಗಳು ಹೀಗಿವೆ: (೧) ಪುರುಷ-ಗಂಡಸು. ಜಗತ್ತಿಗೆ ಕಾರಣವಾದ ಪ್ರಕೃತಿಯನ್ನು ಸ್ತ್ರೀಯೆಂದೂ ಆಕೆಯು ಪರಮಾತ್ಮನ ಶಕ್ತಿಸ್ವರೂಪಳೆಂದೂ ಶಾಸ್ತ್ರಗಳಲ್ಲಿ ವರ್ಣಿಸಿದೆ. ಆದರೆ ಈ ಸ್ತ್ರೀತತ್ತ್ವವನ್ನು ಮಾತೃಭಾವನೆಯಿಂದ ಉಪಾಸನೆಮಾಡಿದಾಗ ಮಾತ್ರವೇ ಮಾನವನು ಉದ್ಧಾರವಾಗುವನು. ಹಾಗಿಲ್ಲದಿದ್ದರೆ ಮಾಯೆಯು ಸೆಳೆತವುಳ್ಳ ಈ ಪ್ರಪಂಚದಲ್ಲಿ ಅನೇಕ ಸಾಧಕರಿಗೆ ಇದು ಕಷ್ಟವಾಗಿ ಪರಿಣಮಿಸಬಹುದು. ಚಿತ್ತಶುದ್ಧಿಯಿಲ್ಲದವರಿಗೆ ದೇವರನ್ನು ಸ್ತ್ರೀಯೆಂದು ಚಿಂತಿಸುವಂತೆ ಹೇಳಿಕೊಟ್ಟಾಗ ಅನೇಕ ಸಮಸ್ಯೆಗಳು ಉದ್ಭವಿಸಬಹುದು. ಆದ್ದರಿಂದ ಭಗವಂತನ ಶಕ್ತಿಯನ್ನು ಪ್ರಕೃತಿಯೆಂದೆಣಿಸಿ ಆಕೆಯು ಭಗವಂತನ ಪತ್ನಿಯೂ ಲೋಕಮಾತೆಯೂ ಆಗಿದ್ದಾಳೆಂದು ತಿಳಿಸುವ ಮೂಲಕ ದೇವರನ್ನು ಗಂಡಸನ್ನಾಗಿಯೇ ಉಳಿಸುವ ಪ್ರಯತ್ನವು ಕೆಲವು ವಾದಿಗಳಲ್ಲಿ ಉಂಟಾಗಿರಬೇಕು. ಇಂಥ ಭಾವನೆಗಳಿಗೆ ಪುರುಷಸೂಕ್ತವು ಜನ್ಮಸ್ಥಳವಾಗಿದ್ದು ಪುರುಷನೆಂದರೆ ಗಂಡಸೆಂದೂ ಅರ್ಥಮಾಡಲು ಅವಕಾಶವನ್ನು ಕಲ್ಪಿಸಿಕೊಟ್ಟಿದೆ. (೨) ವೀರ್ಯ ಅಥವಾ ರೇತಸ್ಸನ್ನೂ ಪುರುಷನೆನ್ನುವರು. ಸೃಷ್ಟಿಯಜ್ಞದಲ್ಲಿ ಪೃಷದಾಜ್ಯಹೋಮದಿಂದ ಉತ್ತಮ ಪ್ರಾಣಿಗಳ ಜನನವಾಯಿತೆಂಬ ಪುರುಷಸೂಕ್ತದ ವರ್ಣನೆಯು ಈ ಅಭಿಪ್ರಾಯವನ್ನು ಸೂಚಿಸುತ್ತದೆ. ಏಕೆಂದರೆ ಪೃಷದಾಜ್ಯವೆಂದರೆ ಪುರುಷನ ವೀರ್ಯವೆಂಬ ಸಾಂಪ್ರದಾಯಿಕ ಅರ್ಥವಿದೆ. (೩) 'ಪುರಿಶೇತೇ ಇತಿ ಪುರುಷಃ' ಎಂದು ಎಲ್ಲಾ ಶರೀರಗಳಲ್ಲಿಯೂ ಇದ್ದುಕೊಂಡಿರುವ ಅಂತರ್ಯಾಮಿಯೇ ಪುರುಷನೆಂಬ ಅರ್ಥವೂ ಪ್ರಸಿದ್ಧವಾಗಿದೆ. (೪) ಪುರುಷ, ಪ್ರಗತಿಶೀಲ-ಪುರಶೀತಿ ಪುರುಷಃ-ಪುರ ಅಗ್ರಗಮನೇ-ಎಂಬ ಧಾತುವಿನಂತೆ 'ಅಗ್ರೇ ಗಚ್ಛತಿ' (ಮುಂದೆ ಬರತಕ್ಕವನು) ಎಂಬರ್ಥವೂ ಪುರುಷಶಬ್ದಕ್ಕೆ ಇದೆ. ಪುರುಷಸೂಕ್ತದ ವಿಶ್ವಪುರುಷನು ಪ್ರಗತಿಶೀಲನು-ಎಂದರ್ಥ. (೫) ಪುರುಷ ಎಂದರೆ ಜೀವಾತ್ಮನೆಂದೂ ಅರ್ಥವಾಗುವದು. ಜೀವಾತ್ಮನು ಪರಮಾತ್ಮನ ಅಂಶನೇ ಆಗಿರುವದರಿಂದ ಈ ಅರ್ಥವೂ ಹೊಂದುತ್ತದೆ. (೬) ಕೊನೆಯದಾಗಿ ಪುರುಷನೆಂದರೆ ಸರ್ವಾಂತರ್ಯಾಮಿಯಾದ ನಾರಾಯಣ ಪರಮಾತ್ಮನೆಂಬುದೇ ಮುಖ್ಯಾರ್ಥವು. 'ಪುರುಷಾನ್ನ ಪರಂ ಕಿಂಚಿತ್' ಎಂಬ ಉಪನಿಷದ್ವಾಕ್ಯವೂ ಇದನ್ನು ಸಮರ್ಥಿಸುವದು. ನಮ್ಮಲ್ಲಿ ಮಹಾಪುರುಷನ ಲಕ್ಷಣವೇನೆಂಬುದನ್ನು ನಿರ್ಣಯಿಸಲು ವೈದಿಕರೂ ಜೈನಬೌದ್ಧರೂ ಬಹಳವಾಗಿ ಪ್ರಯತ್ನಿಸಿರುವರು. ವೈದಿಕಪಂಥದವರು ಮಹಾಪುರುಷನೆಂದರೆ ನಾರಾಯಣನೇ ಎಂದು ಹೇಳುವರು. ಈ ಮಹಾಪುರುಷತತ್ತ್ವಕ್ಕೂ ನಾರಾಯಣತತ್ತ್ವಕ್ಕೂ ಪುರುಷಸೂಕ್ತವೇ ಮೂಲಸ್ಥಾನವಾಗಿರುವದು-ಎಂದು ತಿಳಿಯಬೇಕು.

ಈಗ ಪುರುಷಸೂಕ್ತದ ತಾತ್ಪರ್ಯಕೇಂದ್ರನಾದ ನಾರಾಯಣನ ತತ್ತ್ವವನ್ನು ವಿಚಾರಿಸೋಣ. ಪುರುಷಸೂಕ್ತಮಂತ್ರದ್ರಷ್ಟಾರನಾದ ಋಷಿಯೂ ನಾರಾಯಣ ನೆಂದೇ ಪ್ರಸಿದ್ಧನಾಗಿರುತ್ತಾನೆ. ಶತಪಥ ಬ್ರಾಹ್ಮಣದಲ್ಲಿ 'ಪುರುಷನಾರಾಯಣನು ನಾನು ಸರ್ವಭೂತಗಳನ್ನೂ ಅತಿಕ್ರಮಿಸಬೇಕು, ನಾನು ಸರ್ವವೂ ಆಗಬೇಕು- ಎಂದು ಬಯಸಿದನು; ಅವನು ಐದು ರಾತ್ರಿಗಳು ನಡೆಯತಕ್ಕ ಪುರುಷಮೇಧ-ಎಂಬ ಯಜ್ಞವನ್ನು ಅವಲೋಕಿಸಿದನು. ಅದನ್ನು ತೆಗೆದುಕೊಂಡನು. ಅದರಿಂದ ಯಾಗ ಮಾಡಿದನು. ಅದರಿಂದ ಅವನು ಸರ್ವಭೂತಗಳನ್ನೂ ಅತಿಕ್ರಮಿಸಿ ಸರ್ವವೂ ತಾನೇ ಆದನು' ಎಂದು ಮುಂತಾಗಿ ವಿವರಿಸಿ ಮುಂದೆ ಪುರುಷಸೂಕ್ತವನ್ನು ಉದಾಹರಿಸ ಲಾಗಿದೆ. ಹೀಗೆ ಪುರುಷನಾರಾಯಣನು ಪುರುಷಯಜ್ಞವನ್ನು ಮಾಡಿದವನೂ ಅದರ ಸ್ವರೂಪವೂ ಪಶುವೂ ತಾನೇ ಆಗಿರುವನು ಎಂದು- ಪುರುಷಸೂಕ್ತವು ತಿಳಿಸುತ್ತಿದೆ.

ನಾರಾಯಣಶಬ್ದದಲ್ಲಿ ನಾರಾ-ಅಯನ ಎಂದು ಎಂದು ಎರಡು ಪದಗಳಿವೆ. ನಾರಾ ಎಂಬ ಶಬ್ದಕ್ಕೆ ಜಲ, ಕಮಲ, ಯೋಗಿಗಳು, ಭಕ್ತರು, ಚರಾಚರವಿಶ್ವ, ಭಗವಂತನ ಗುಣಗಳಾದ ಜ್ಞಾನಶಕ್ತಿಬಲೈಶ್ವರ್ಯವೀರ್ಯತೇಜಸ್ಸುಗಳು, ಜೀವಾತ್ಮ, ಮಾನವಸಮಾಜ-ಈ ಅರ್ಥಗಳು ಮಾಡಲ್ಪಟ್ಟಿವೆ. ಅಯನ ಶಬ್ದಕ್ಕೆ ನಿವಾಸಿ, ಆಕರ, ವ್ಯಾಪ್ಯ, ಅಂತರ್ಯಾಮಿ, ಆಶ್ರಯ, ಅಧಿಷ್ಠಾನ, ಪ್ರವರ್ತಕ, ಸಾಕ್ಷಿ, ಉಪಾಯ-ಇತ್ಯಾದಿ ಅರ್ಥಗಳನ್ನು ಬಲ್ಲವರು ಹೇಳುತ್ತಾರೆ. ಈ ಎರಡು ಪದಗಳ ಅರ್ಥವನ್ನು ಗುಣಿಸಿದರೆ ನಾರಾಯಣ ಶಬ್ದಕ್ಕೆ ಎಂಭತ್ತು ವಿಧವಾದ ಅರ್ಥಗಳು ಹುಟ್ಟುತ್ತವೆಯೆಂತ ತಿಳಿದುಬಂದಿದೆ. ನಾರ ಶಬ್ದಕ್ಕೆ ಮನುಸ್ಮೃತಿ-ಮುಂತಾದ ಬಹು ಕಡೆಗಳಲ್ಲಿ ನೀರು ಎಂಬರ್ಥವು ಸೂಚಿಸಲ್ಪಟ್ಟಿದೆ. ವಿಶ್ವದ ಮೂಲರೂಪವು ಜಲವೆಂದು ಅನೇಕಕಡೆಗಳಲ್ಲಿ ಹೇಳಿರುವದರಿಂದ ಇಲ್ಲಿ ನೀರು ಎಂಬುದಕ್ಕೆ ವಿಶ್ವವೆಂದು ಅರ್ಥ ವಾಗುತ್ತದೆ. ನಾರಾಯಣತತ್ತ್ವಕ್ಕೆ ಈ ರೀತಿ ಅರ್ಥಮಾಡುವದಕ್ಕೆ ಮೂಲವು ಋಗ್ವೇದದ ವಿಶ್ವಕರ್ಮಸೂಕ್ತದಲ್ಲಿ ದೊರಕುತ್ತದೆ. ಅದರ ತಾತ್ಪರ್ಯವು ಹೀಗಿದೆ: "ಯಾವನು ಸ್ವರ್ಗಭೂಮಿಗಳಿಗೂ ದೇವಾಸುರರಿಗೂ ಪರನಾಗಿರುವನೋ ಯಾವನ ಪ್ರಥಮಗರ್ಭವನ್ನು ಜಲವು ಪಡೆದಿದ್ದಿತೋ ಯಾರಲ್ಲಿ ಸರ್ವದೇವತೆಗಳನ್ನೂ ವಿಶ್ವ ವನ್ನೂ ನೋಡುವೆವೋ ಇವನಲ್ಲಿ ಎಲ್ಲವೂ ಏಕವಾಗಿರುವವು. ಏಕವಾಗಿರುವ ಈ ಪಾತ್ರವು ಅಜನಾಭಿಯಲ್ಲಿ ನೆಲೆಸಿದ್ದಿತು. ಅದರಲ್ಲಿ ಸಕಲಪದಾರ್ಥಗಳೂ ವಿಶ್ವವೂ ಇದ್ದವು" (ಋ. ೧೦-೮೨-೫-೬) ಹೀಗೆ ವಿಶ್ವಪುರುಷನು ನಾರಾಯಣನು. ವಿಶ್ವ ಶರೀರವು ಯಜ್ಞರೂಪವಾದ ಪರಿಣಾಮದಿಂದ ಪ್ರಗತಿಯನ್ನು ಹೊಂದಿ ಮಾನವ ಸಮಾಜದಲ್ಲಿ ಸಾರ್ಥಕ್ಯವನ್ನೂ ಪಡೆದಿದೆ. ಇಂಥ ಸಮಾಜರೂಪಿಯಾದ ಭಗವಂತನ ಆರಾಧನೆಯಿಂದ ಮಾನವನ ಸಕಲ ಇಷ್ಟಾರ್ಥಗಳೂ ಸಿದ್ಧಿಸುವವು- ಎಂದು ಹೇಳಿ ಪುರುಷಸೂಕ್ತವು ಸಮಾಪ್ತಿಗೊಳ್ಳುತ್ತದೆ. ಇನ್ನು ಮುಂದೆ ಬಿಡಿಬಿಡಿಯಾಗಿ ಒಂದೊಂದೇ ಋಕ್ಕಿನ ಅರ್ಥವನ್ನು ವಿಚಾರಮಾಡೋಣ.

———

# ಗುಣಪದಾರ್ಥವಿವೇಕ

( ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು )

( ಕಳೆದ ಸಂಚಿಕೆಯ ೨೧ನೆಯ ಪುಟದಿಂದ ಮುಂದಕ್ಕೆ )

ಗೀತಾಶಾಸ್ತ್ರದಲ್ಲಿ ಸಾಂಖ್ಯವೇ ಮೊದಲಾದ ದರ್ಶನಾಂತರಗಳಿಂದಲೂ ಸಾರಗ್ರಹಣದೃಷ್ಟಿಯಿಂದ ವೇದಕ್ಕೆ ವಿರುದ್ಧವಲ್ಲದ ಹಾಗೂ ಶಾಸ್ತ್ರಾರ್ಥವನ್ನು ವಿವರಿಸುವದಕ್ಕೆ ತಕ್ಕುದಾದ ಅಂಶಗಳನ್ನು ಬಳಸಿಕೊಳ್ಳಲಾಗಿದೆ- ಎಂದು ಹಿಂದೆ ತಿಳಿಸಲಾಗಿದೆ. ಅದರಲ್ಲಿಯೂ ಸಾಂಖ್ಯರಿಗೆ ಒಪ್ಪಾದ ಗುಣವಿವೇಕವನ್ನು ಮುಖ್ಯವಾಗಿ ಸ್ವೀಕರಿಸಲಾಗಿದೆ. ಆದ್ದರಿಂದ ಶಾಸ್ತ್ರೋಪದೇಶಗಳ ನಿರ್ಣಯಕ್ಕಾಗಿ ಮೊಟ್ಟಮೊದಲು ಗುಣಪದಾರ್ಥವಿವೇಕವನ್ನು ಮಾಡುವೆವು.

## ಗುಣಪದಾರ್ಥವಿವೇಚನೆಯ ಆವಶ್ಯಕತೆ

ಸಾಂಖ್ಯರ ಅಭಿಪ್ರಾಯವು ಹೀಗಿರುತ್ತದೆ : 'ತ್ರಿಗುಣಾತ್ಮಕವಾದ ಪ್ರಕೃತಿಯು ಕರ್ತೃವಾಗಿರುವದು. ಪುರುಷನು ಅದರೊಡಗೂಡಿ ಅವಿವೇಕದಿಂದ ಭೋಕ್ತೃವೆನಿಸಿ ಬದ್ಧನಾಗಿರುತ್ತಾನೆ. ಆದರೆ ಸಂಸಾರವು ಗುಣತ್ರಯಗಳ ವ್ಯಾಪಾರವೇ, ನನ್ನದಲ್ಲ- ಎಂದು ತಿಳಿವಳಿಕೆಯನ್ನು ಮಾಡಿಕೊಂಡರೆ ಮುಕ್ತನಾಗುತ್ತಾನೆ.' ಇದೇ ಅಭಿಪ್ರಾಯವನ್ನು ಗೀತೆಯಲ್ಲಿಯೂ ಒಪ್ಪಿಕೊಳ್ಳಲಾಗಿದೆ. ಹದಿಮೂರನೆಯ ಅಧ್ಯಾಯದಲ್ಲಿ ಹೀಗಿದೆ : "ಪ್ರಕೃತಿಯಲ್ಲಿ ಅಭಿಮಾನಹೊಂದಿ ನಿಂತಿರುವ ಪುರುಷನು ಪ್ರಕೃತಿಯಿಂದ ಹುಟ್ಟಿದ ಗುಣಗಳನ್ನು ಭೋಗಿಸುತ್ತಾನೆ. ಇವನಿಗೆ ಸದಸದ್ಯೋನಿಗಳಲ್ಲಿ ಜನ್ಮಗಳುಂಟಾಗುವದಕ್ಕೆ ಈ ಗುಣಸಂಗವೇ ಕಾರಣವು." ಇಲ್ಲಿ ಪ್ರಕೃತಿಯ ಗುಣಗಳೆಂದರೆ ಯಾವವು ? ಗುಣಗಳ ಸಂಗದಿಂದ ಬಂಧವು ಹೇಗಾಗುತ್ತದೆ ? ಗುಣಗಳಿಂದ ಬಿಡುಗಡೆಯಾಗುವ ಬಗೆ ಹೇಗೆ ? ಎಂಬ ವಿಚಾರಗಳನ್ನು ವಿವರಿಸುವದಕ್ಕೇ ಈ ಇಡಿಯ ಗೀತಾಶಾಸ್ತ್ರವು ಹೊರಟಿರುವದರಿಂದ ಗುಣನಿರೂಪಣೆಯನ್ನು ಮೊದಲು ಮಾಡಬೇಕಾಗಿರುತ್ತದೆ. ಅದಕ್ಕಾಗಿ ಗುಣವಿವೇಕವೂ ಅವಶ್ಯಕವಾಗಿದೆ.

## ಗುಣಗಳೆಂದರೆ ಸತ್ತ್ವಾದಿಗಳೆಂಬುದು ಪಾರಿಭಾಷಿಕವು

ಸತ್ತ್ವವೇ ಮುಂತಾದ ಹೆಸರುಗಳನ್ನು ಹೊಂದಿರುವವೇ ಗುಣಗಳು, ಅವುಗಳಿಗೆಲ್ಲ ಸಾಧಾರಣವಾದದ್ದು ಪ್ರಕೃತಿಯು. ಇದೇ ಪ್ರಧಾನವು- ಎಂದು ಸಾಂಖ್ಯರು ಹೇಳುವರು. ಈ ಶಾಸ್ತ್ರದಲ್ಲಾದರೊ, ಆ ಪ್ರಕೃತಿಯನ್ನು ಮಾಯೆಯೆಂದು ಕರೆದು ಅದು ಭಗವದಧೀನವಾಗಿದೆ- ಎಂದು ಹೇಳಿರುವದು ವಿಶೇಷವು. (೧) "ಪ್ರಕೃತಿಯಿಂದುಂಟಾದ ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಗುಣಗಳು ಅವ್ಯಯನಾದ ದೇಹಿಯನ್ನು ದೇಹದಲ್ಲಿ ಕಟ್ಟಿಹಾಕುವವು." (೨)"ಗುಣಮಯವಾದ ಈ ಪ್ರಕೃತಿಯು ದೇವನಾದ ನನ್ನ ಮಾಯೆಯು" ಎಂದು ಇಲ್ಲಿ ಹೇಳಿರುವದನ್ನು ಗಮನಿಸಬೇಕು. ಭಾಷ್ಯಕಾರರು ಕೂಡ- "ಸತ್ತ್ವ, ರಜಸ್ಸು, ತಮಸ್ಸು- ಎಂಬೀ ಹೆಸರುಳ್ಳ 'ಗುಣ'ಗಳೆಂಬ ಪಾರಿಭಾಷಿಕವಾದ ಶಬ್ದವು (ಸಾಂಖ್ಯಶಾಸ್ತ್ರಪ್ರಸಿದ್ಧವಾದದ್ದಾಗಿದೆ.) ವೈಶೇಷಿಕರು

ಹೇಳುವಂತೆ ದ್ರವ್ಯಾಶ್ರಿತವಾದ ರೂಪವೇ ಮುಂತಾದವುಗಳಲ್ಲ. ಏಕೆಂದರೆ ಗುಣಗುಣಿಗಳಿಗೆ ಭೇದವು ಇಲ್ಲಿ ವಿವಕ್ಷಿತವಾಗಿಲ್ಲ. ಆದ್ದರಿಂದ ಗುಣಗಳಂತೆ ಯಾವಾಗಲೂ ಪರಾಧೀನವೇ ಆಗಿದ್ದು ಅವಿದ್ಯಾತ್ಮಕವಾಗಿರುವದರಿಂದ ಕ್ಷೇತ್ರಜ್ಞನನ್ನು ಕಟ್ಟಿಹಾಕುವಂತೆ ಕಂಡುಬರುತ್ತವೆ– ಎಂದರೆ ಕ್ಷೇತ್ರಜ್ಞನನ್ನು ಆಶ್ರಯಿಸಿಕೊಂಡೇ ತೋರುತ್ತವೆಯಾದ್ದರಿಂದ ಕಟ್ಟಿಹಾಕುತ್ತವೆ – ಎಂದು ಹೇಳಿದೆ. ಅವುಗಳಾದರೋ ಪ್ರಕೃತಿಯಿಂದುಂಟಾದವುಗಳು ; ಎಂದರೆ ಭಗವಂತನ ಮಾಯೆಯಿಂದ ಹುಟ್ಟಿದವುಗಳಾಗಿ ಎಲೈ ಮಹಾಬಾಹುವೆ, ಈ ಶರೀರದಲ್ಲಿ ದೇಹವುಳ್ಳವನಾದ (ದೇಹಾಭಿಮಾನಿಯಾದ) ಅವ್ಯಯನಾದ ಆತ್ಮನನ್ನು ಕಟ್ಟಿಹಾಕಿದಂತೆ ತೋರುತ್ತವೆ"– ಎಂದು ವಿವರಿಸಿರುತ್ತಾರೆ. ಇಲ್ಲಿ ಗುಣಗಳು ಅವಿದ್ಯಾಕಲ್ಪಿತವಾದವುಗಳು ಎಂಬಿದು ಸ್ಪಷ್ಟ. ಏಕೆಂದರೆ ಪ್ರಕೃತಿಯನ್ನು ಮಾಯೆ ಎಂದು ಕರೆದಿರುವದೇ ಇದಕ್ಕೆ (ಹೇತುವಾಗಿದೆ). ಆದ್ದರಿಂದಲೇ ಇವು ಜ್ಞಾನಬಾಧ್ಯವಾದವುಗಳು. ಮತ್ತು ಜ್ಞಾನಕ್ಕಿಂತ ಮುಂಚೆ ಬಂಧಕಗಳು ಎಂದೂ ಸೂಚಿಸಿದಂತಾಗಿದೆ.

### ಸುಖದುಃಖಮೋಹಗಳೂ ಗುಣಶಬ್ದಾರ್ಥಗಳೇ

ಗುಣಶಬ್ದವು ಹೇಗೆ ಸತ್ತ್ವಾದಿಗುಣಗಳಲ್ಲಿ ಪ್ರಯೋಗಿಸಲ್ಪಟ್ಟಿದೆಯೋ ಹಾಗೆಯೇ ಗುಣಗಳಿಂದ ಹುಟ್ಟಿದ ಸುಖದುಃಖಾದಿಗಳಲ್ಲಿಯೂ ಪ್ರಯುಕ್ತವಾಗಿದೆ– ಎಂಬಿದು ಸಾಂಖ್ಯದರ್ಶನದಂತೆ ಇಲ್ಲಿಯೂ ಒಪ್ಪಾಗಿದೆ. ಹೇಗೆಂದರೆ: ಪ್ರೀತಿ, ಅಪ್ರೀತಿ, ವಿಷಾದ, ಎಂಬ- ಪ್ರಕಾಶ, ಪ್ರವೃತ್ತಿನಿಯಮಗಳೆಂಬ ಪ್ರಯೋಜನವುಳ್ಳವು (ಗುಣಗಳು) ಎಂದು ಸಾಂಖ್ಯರ ಅಭಿಪ್ರಾಯವಾಗಿದೆ. ಇದಕ್ಕನುಗುಣವಾಗಿ ಭಗವಂತನೂ ಕೂಡ– 'ಪ್ರಕೃತಿಯಿಂದ ಹುಟ್ಟಿರುವ ಗುಣಗಳನ್ನು ಪುರುಷನು ಅನುಭವಿಸುತ್ತಾನೆ' ಎಂದು ಹೇಳಿರುತ್ತಾನೆ. ಭಾಷ್ಯಕಾರರು ಕೂಡ– 'ಕಾರ್ಯಕರಣಗಳ ರೂಪದಿಂದ ಪರಿಣಾಮವಾಗಿರುವ ಅವಿದ್ಯಾಲಕ್ಷಣವಾದ ಪ್ರಕೃತಿಯಲ್ಲಿ ಇದ್ದುಕೊಂಡಿರುವದೇ ಪ್ರಕೃತಿಸ್ಥತ್ವವು. ಪ್ರಕೃತಿಯನ್ನೇ ತಾನು ಎಂದು ತಿಳಿಯುವದು–ಎಂದಭಿಪ್ರಾಯ. ಏಕೆಂದರೆ ಆ ಪ್ರಕೃತಿಯಿಂದ ಹುಟ್ಟಿರುವ ಹಾಗೂ ಸುಖದುಃಖಮೋಹಾಕಾರವಾಗಿ ಹೊರತೋರಿಕೊಂಡಿರುವ ಗುಣಗಳನ್ನು 'ನಾನು ಸುಖಿಯು, ದುಃಖಿಯು, ಪಂಡಿತನು, ಮೂಢನು' ಎಂಬ ರೀತಿಯಲ್ಲಿ ಅನುಭವಿಸುತ್ತಾನೆ, ಪಡೆದುಕೊಳ್ಳುತ್ತಾನೆ-ಎಂದರ್ಥ" ಎಂದಿದ್ದಾರೆ. ಇಲ್ಲಿ ಕಾರ್ಯಕರಣರೂಪವಾದ ವಿಕಾರಗಳು ಮಾತ್ರವೇ ಅಲ್ಲ, ಸುಖದುಃಖಮೋಹಗಳೂ ಪ್ರಕೃತಿಯ ಗುಣದ ಕಾರ್ಯಗಳೇ ಆಗಿವೆ. ಹಿಂದೆಯೇ "ಪ್ರಕೃತಿಯಿಂದ ಹುಟ್ಟಿದ ವಿಕಾರಗಳಾದ ಗುಣಗಳನ್ನೂ ತಿಳಿಯುವವನಾಗು" ಎಂದು ಹೇಳಿಯೂ ಇದೆ. "ಬುದ್ಧಿಯಿಂದ ದೇಹೇಂದ್ರಿಯಗಳವರೆಗಿನ, ಸುಖದುಃಖಮೋಹಾಕಾರವಾಗಿವಿಕಾರವನ್ನು ಹೊಂದಿರುವ ಗುಣಗಳನ್ನು" ಎಂದು ಭಾಷ್ಯಕಾರರೂ ವಿವರಿಸಿದ್ದಾರೆ. ಆದ್ದರಿಂದ ಸುಖದುಃಖಮೋಹಗಳೂ ಗುಣಶಬ್ದವಾಚ್ಯಗಳೆಂದೇ ನಿಶ್ಚಯವಾಯಿತು.

---

# ೪೯ನೆಯ ಸಂಪುಟಕ್ಕೆ ಪೋಷಕರುಗಳು

ಅಧ್ಯಾತ್ಮಪ್ರಕಾಶಪತ್ರಿಕೆಯ ೪೯ನೆಯ ಸಂಪುಟಕ್ಕೆ (1979–80) ಈ ಕೆಳಗೆ ಕಂಡ ಮಹಾಶಯರುಗಳು ರೂ. ೧೨ ರಂತೆ ಪೋಷಣದ್ರವ್ಯವನ್ನು ಕೊಟ್ಟು ಪ್ರೋತ್ಸಾಹಿಸಿದ್ದಾರೆ. ಶ್ರೀಯುತರುಗಳಾದ : ಚಂದ ನಂ. 1. ಕೆ.ಎನ್. ಮುರಳೀಧರ ರವರು, ಕಲ್ಕತ್ತ (ರೂ. ೨೪) ೭. ಹೆಚ್. ವೇಣುಗೋಪಾಲಸೋಮಯಾಜಿಗಳು, ಹರಿಹರ. 8. ಹೆಚ್. ವಿ. ಶೇಷಗಿರಿರಾಯರು, (ಬೆಂ) 9. ಸಿ. ಹಿರಣ್ಯಪ್ಪನವರು, ತೊರೆಕಾಡನಹಳ್ಳಿ. 16. ಶಾ॥ ಕೃಷ್ಣಪ್ಪನವರು, ಅಣತಿ (ರೂ. ೨೦) 18. ಕೆ.ಎಸ್. ಸೂರ್ಯನಾರಾಯಣರಾವ್, ಹೆಬ್ಬಾಳು. 20. ಗುರುಪುತ್ರ ಚಂದ್ರಶೇಖರಸ್ವಾಮಿ ಯವರು, ಡಿಗ್ಗಿ. 24. ಜಿ. ಸೂರ್ಯನಾರಾಯಣರಾಯರು, ಕಿಕ್ಕೇರಿ. 33. ಎ.ಜಿ. ಶರ್ಮರು, ಮೈಸೂರು. 35. ಬಿ. ಹೆಚ್. ಪಾಟೀಲರು, ಕಮಡೊಳ್ಳಿ. 42. ಸ್ವಾಮಿ ಶ್ರೀಪಾದದಾಸರು, ಬೆಂಗಳೂರು. 43. ವಿಶ್ವನಾಥಪ್ಪನವರು, ಹಾರಂಗಿ. 49. ಎಲ್. ವೆಂಕಟರಮಣಯ್ಯನವರು, (ಬೆಂ) 55. ಎ. ರಾಮಸ್ವಾಮಯ್ಯನವರು, ಮೈಸೂರು. 62. ಎಸ್. ಪಿ. ಬಣಗಾರರವರು, ಯೇರಹಳ್ಳಿ. 72. ಕೆ. ಎಸ್. ಶ್ರೀರಾಮ್‌ರವರು ಕೆ.ಜಿ.ಎಫ್. 83. ಪಿ. ಆರ್. ರಂಗಸ್ವಾಮಿಯವರು, (ಬೆಂ) 84. ಕೆ. ಎನ್. ಭೈರಪ್ಪ ನವರು, (ಬೆಂ) 87. ಹೆಚ್. ವಿ. ಸುಬ್ರಾಯರು (ಬೆಂ) (ರೂ. ೧೬) 94. ರಾಸಲೆ ವೆಂಕೋಬರಾವ್, ಆದವಾನಿ. 96. ಸಾಕರೆ ಈರಣ್ಣ ಗೋಪಾಲರಾಯರು, ಆದವಾನಿ 102. ಸಿ. ಕಾಂತಣ್ಣನವರು, ಆದವಾನಿ. 104. ಎಂ. ಹನುಮಂತರಾಯರು, ಆದ ವಾನಿ. 110. ಗೋಪಾಲಕೃಷ್ಣರಾಯರು, ವಿಟ್ಲ (ರೂ. ೧೫) 115. ಹೆಚ್. ಎಲ್. ಚಂದ್ರಮೌಳಿಯವರು, ನವದೆಹಲಿ. 117. ಹೆಚ್. ಎಸ್. ಗುಂಡಪ್ಪನವರು, ಬೊಂಬಾಯಿ. 133. ಶ್ರೀಮತಿ ವಿಜಯಾ ರಾಜೀವ್‌ರವರು, (ಬೆಂ) 136. ಡಿ.ಎಸ್. ರಾಮಚಂದ್ರಯ್ಯನವರು, ನಂದಿ. 150. ಸದಾನಂದಮೂಡಬಿದ್ರಿಯವರು, (ಬೆಂ) 152. ಹೆಚ್. ಎಸ್. ಚಂದ್ರಶೇಖರಶಾಸ್ತ್ರಿಗಳು, (ಬೆಂ) 153. ಹೆಚ್. ಎಸ್. ನಾಗಭೂಷಣರಾಯರು, (ಬೆಂ) 153. ಹೆಚ್. ಎಸ್. ಬಾಲಕೃಷ್ಣರವರು, (ಬೆಂ) 156. ಹೆಚ್. ಕೆ. ಸುಬ್ರಹ್ಮಣ್ಯಂರವರು, (ಬೆಂ) 160. ಪಂಡಿತ ಕೇಶವಶಾಸ್ತ್ರಿ ಹೆಬ್ಬಾಳಕರ್‌ರವರು, ಷಹಬಾದ್, 162. ಕೆ. ಶೇಷಗಿರಿಶಾಸ್ತ್ರಿಯವರು, ಭದ್ರಾವತಿ. 163. ಎಂ. ಜಿ. ಸುಂದರರಾಜ್‌ರವರು, ಭದ್ರಾವತಿ. 164. ಹೆಚ್.ಆರ್. ಸೂರ್ಯ ನಾರಾಯಣರವರು, ಭದ್ರಾವತಿ. 189. ಶಿವರಾಮಶೆಟ್ಟಿಯವರು, ಯು. ಕೆ. ಪಿ. ನಾರಾಯಣಪುರ. 208. ಕೆ. ವಿ. ಸುಬ್ರಾಯರವರು, (ಬೆಂ) 212. ಕೆ.ಎಸ್. ಮೂಡ್ಲಿಗೌಡರು, ಹೊಳೆನರಸೀಪುರ. 228. ಮೆಸರ್ಸ್ ದೊಡ್ಡಹೊನ್ನಪ್ಪ ಅಂಡ್ ಕೋ. (ಬೆಂ) 229. ಶ್ರೀಶ್ರೀನಿವಾಸ ವೀವಿಂಗ್ ಎಂಡ್ ಸಿಲ್ಕ್ ಥ್ರೋಯಿಂಗ್ ಫ್ಯಾಕ್ಟರಿ, (ಬೆಂ) 230. ಮೆಸರ್ಸ್. ಮೈಸೂರು ಕೆ. ಶಂಕರಪ್ಪ ಅಂಡ್ ಸನ್ಸ್, (ಬೆಂ) 231. ಹೆಚ್. ಎಸ್. ಗುಂಡಣ್ಣನವರು, (ಬೆಂ) 232. ಹೆಚ್. ವಿ. ಗಂಗಾಧರಪ್ಪ ನವರು, (ಬೆಂ) 234. ಹೆಚ್. ಕೆ. ರಮೇಶ್‌ರವರು, ತಿಪಟೂರು. 243. ಎಸ್. ಪಿ. ಶಾಮಣ್ಣನವರು, (ಬೆಂ) 254. ಕೆ. ರಾಜಗೋಪಾಲರಾಯರು, (ಬೆಂ),

(ಈ ಪಟ್ಟಿಯು ಮುಂದಿನ ಸಂಚಿಕೆಗೆ ಮುಂದುವರಿಯಲಿದೆ.)

ಏವಂ ಪೃಚ್ಛತಿ ರಾಮೇ ಸಾ ಕೈಕೇಯೀ ರಾಮಮಬ್ರವೀತ್ ।
ತ್ವಮೇವ ಕಾರಣಂ ಹ್ಯತ್ರ ರಾಜ್ಞೋ ದುಃಖೋಪಶಾಂತಯೇ ॥ ೫೨ ॥
ಕಿಂಚಿತ್ ಕಾರ್ಯಂ ತ್ವಯಾ ರಾಮ ಕರ್ತವ್ಯಂ ನೃಪತೇರ್ಹಿತಮ್ ।
ಕುರು ಸತ್ಯಪ್ರತಿಜ್ಞಸ್ತ್ವಂ ರಾಜಾನಂ ಸತ್ಯವಾದಿನಮ್ ॥ ೫೩ ॥

೫೧-೫೩. 'ಇದೇನು ಅಳುತ್ತಿರುವದು ?' ಏಕೆ? ಎಂದು ವಸಿಷ್ಠನೂ ಅಲ್ಲಿಗೆ ಬಂದನು. ರಾಮನು 'ಇದೇನು ? ರಾಜನ ದುಃಖಕ್ಕೆ ಕಾರಣವೇನು ?' ಎಂದು ಕೇಳಿದನು. ಹೀಗೆ ರಾಮನು ಪ್ರಶ್ನಿಸಲಾಗಿ ಕೈಕೇಯಿಯು ರಾಮನನ್ನು ಕುರಿತು ಇಂತೆಂದಳು: 'ಎಲೈ ರಾಮನೆ, ರಾಜನ ಸಂಕಟಪರಿಹಾರಕ್ಕೆ ನೀನೇ ಕಾರಣನು. ಹೇಗೆಂದರೆ: ರಾಜನಿಗೆ ಹಿತವಾದ ಒಂದು ಚಿಕ್ಕ ಕೆಲಸವು ನಿನ್ನಿಂದಾಗಬೇಕಾಗಿದೆ. ಸತ್ಯಪ್ರತಿಜ್ಞನಾದ ನೀನು ರಾಜನನ್ನು ಸತ್ಯವಾದಿಯನ್ನಾಗಿ ಮಾಡುವವನಾಗು.

ರಾಜ್ಞಾ ವರದ್ವಯಂ ದತ್ತಂ ಮಮ ಸಂತುಷ್ಟಚೇತಸಾ ।
ತ್ವದಧೀನಂ ತು ತತ್ಸರ್ವಂ ವಕ್ತುಂ ತ್ವಾಂ ಲಜ್ಜತೇ ನೃಪಃ ॥ ೫೪ ॥
ಸತ್ಯಪಾಶೇನ ಸಂಬದ್ಧಂ ಪಿತರಂ ತ್ರಾತುಮರ್ಹಸಿ ।
ಪುತ್ರಶಬ್ದೇನ ಚೈತದ್ಧಿ ನರಕಾತ್ ತ್ರಾಯತೇ ಪಿತಾ ॥ ೫೫ ॥
ರಾಮಸ್ತಯೋದಿತಂ ಶ್ರುತ್ವಾ ಶೂಲೇನಾಭಿಹತೋ ಯಥಾ ।
ವ್ಯಥಿತಃ ಕೈಕಯೀಂ ಪ್ರಾಹ ಕಿಂ ಮಾಮೇವಂ ಪ್ರಭಾಷಸೇ ॥ ೫೬ ॥

೫೪-೫೬. ಸಂತುಷ್ಟಮನಸ್ಸಿನ ರಾಜನಿಂದ ನನಗೆ ಎರಡು ವರಗಳು ಕೊಡಲ್ಪಟ್ಟವು. ಆದರೆ ಅದೆಲ್ಲವೂ ನಿನ್ನ ಸ್ವಾಧೀನದಲ್ಲಿದೆ. ರಾಜನು ನಿನ್ನನ್ನು ಕುರಿತು ಹೇಳಲು ನಾಚಿಕೆಪಡುವನು. ಹೀಗೆ ಸತ್ಯದ ಪಾಶದಿಂದ ಕಟ್ಟಲ್ಪಟ್ಟಿರುವ ತಂದೆಯನ್ನು ನೀನು ಕಾಪಾಡಬೇಕಾಗಿದೆ. ತಂದೆಯು ನರಕದಿಂದ ಕಾಪಾಡಲ್ಪಟ್ಟರೆ ಅವನನ್ನೇ ಪುತ್ರನೆಂದು ಹೇಳುವರಷ್ಟೆ !' ಎಂದಳು. ಆಕೆಯು ಹೇಳಿದ್ದನ್ನು ಕೇಳಿದ ರಾಮನು ಶೂಲದಿಂದ ತಿವಿಯಲ್ಪಟ್ಟವನಂತೆ ಬಹಳ ದುಃಖಗೊಂಡವನಾಗಿ ಕೈಕೇಯಿಯನ್ನು ಕುರಿತು 'ಇದೇನು ? ನನ್ನನ್ನು ಕುರಿತು ಹೀಗೆ ಹೇಳುತ್ತಿರುವೆ ?' ಎಂದನು.

ಪಿತ್ರರ್ಥೇ ಜೀವಿತಂ ದಾಸ್ಯೇ ಪಿಬೇಯಂ ವಿಷಮುಲ್ಬಣಮ್ ।
ಸೀತಾಂ ತ್ಯಕ್ಷ್ಯೇಽಥ ಕೌಸಲ್ಯಾಂ ರಾಜ್ಯಂ ಚಾಪಿ ತ್ಯಜಾಮ್ಯಹಮ್ ॥
ಅನಾಜ್ಞಪ್ತೋಽಪಿ ಕುರುತೇ ಪಿತುಃ ಕಾರ್ಯಂ ಸ ಉತ್ತಮಃ ।
ಉಕ್ತಃ ಕರೋತಿ ಯಃ ಪುತ್ರಃ ಸ ಮಧ್ಯಮ ಉದಾಹೃತಃ ॥ ೫೮ ॥
ಉಕ್ತೋಽಪಿ ಕುರುತೇ ನೈವ ಸ ಪುತ್ರೋ ಮಲ ಉಚ್ಯತೇ ।
ಅತಃ ಕರೋಮಿ ತತ್ಸರ್ವಂ ಯನ್ಮಾಮಾಹ ಪಿತಾ ಮಮ ॥ ೫೯ ॥
ಸತ್ಯಂ ಸತ್ಯಂ ಕರೋಮ್ಯೇವ ರಾಮೋ ದ್ವಿರ್ನಾಭಿಭಾಷತೇ ।

೫೭-೫೯. ಮುಂದುವರೆದು “ನಾನು ತಂದೆಗಾಗಿ ಪ್ರಾಣವನ್ನಾದರೂ ಕೊಡುವೆನು. ಕ್ರೂರವಾದ ವಿಷವನ್ನು ಕುಡಿದೇನು. ಸೀತೆಯನ್ನಾಗಲಿ. ಕೌಸಲ್ಯೆಯನ್ನಾಗಲೀ ರಾಜ್ಯವನ್ನೇ ಆಗಲಿ ಬಿಟ್ಟು ಬಿಡುವೆನು. ತಂದೆಯು ಅಪ್ಪಣೆಮಾಡದೆ ಹೋದರೂ ಪಿತೃವಿನ ಕರ್ತವ್ಯವನ್ನು ಅರಿತು ಯಾವನು ಮಾಡುವನೋ ಅವನು ಉತ್ತಮನು. ಹೇಳಿಸಿಕೊಂಡು ಅನಂತರ ಮಾಡುವವನು ಮಧ್ಯಮನು. ಹೇಳಿದರೂ ಮಾಡದೆಯೇ ಇರುವವನು ಮಲ (ಕೊಳೆ) ನೆನಿಸುವನು. ಆದ್ದರಿಂದ ನನ್ನ ತಂದೆಯು ಏನು ಹೇಳಿರುವನೋ ಅದೆಲ್ಲವನ್ನೂ ಮಾಡುವೆನು. ನಿಜವಾಗಿಯೂ ಖಂಡಿತವಾಗಿಯೂ ಮಾಡಿಯೇ ತೀರುವೆನು. ರಾಮನೆಂದರೆ ಎರಡು ಬಗೆಯ ಮಾತನಾಡುವವನಲ್ಲ” ಎಂದನು.

ಇತಿ ರಾಮಪ್ರತಿಜ್ಞಾಂ ಸಾ ಶ್ರುತ್ವಾ ವಕ್ತುಂ ಪ್ರಚಕ್ರಮೇ ।
ರಾಮ ತ್ವದಭಿಷೇಕಾರ್ಥಂ ಸಂಭಾರಾಃ ಸಂಭೃತಾಶ್ಚ ಯೇ ॥ ೬೦ ॥

ತೈರೇವ ಭರತೋಽವಶ್ಯಮಭಿಷೇಚ್ಯಃ ಪ್ರಿಯೋ ಮಮ ।
ಅಪರೇಣ ವರೇಣಾಶು ಚೀರವಾಸಾ ಜಟಾಧರಃ ॥ ೬೧ ॥

ವನಂ ಪ್ರಯಾಹಿ ಶೀಘ್ರಂ ತ್ವಮದ್ಯೈವ ಪಿತುರಾಜ್ಞಯಾ ।
ಚತುರ್ದಶ ಸಮಾಸ್ತತ್ರ ವಸ ಮುನ್ಯನ್ನಭೋಜನಃ ॥ ೬೨ ॥

ಏತದೇವ ಪಿತುಸ್ತೇಽದ್ಯ ಕಾರ್ಯಂ ತ್ವಂ ಕರ್ತುಮರ್ಹಸಿ ।
ರಾಜಾ ತು ಲಜ್ಜತೇ ವಕ್ತುಂ ತ್ವಾಮೇವಂ ರಘುನಂದನ ॥ ೬೩ ॥

೬೦-೬೩. ಹೀಗೆ ರಾಮನು ಪ್ರತಿಜ್ಞೆ ಮಾಡಿದುದನ್ನು ಆಕೆಯು ಕೇಳಿ ಹೀಗೆ ಹೇಳಲಾರಂಭಿಸಿದಳು. “ಎಲೈ ರಾಮನೆ, ನಿನ್ನ ಪಟ್ಟಾಭಿಷೇಕಕ್ಕಾಗಿ ಸಜ್ಜುಗೊಂಡಿರುವ ಸಾಮಗ್ರಿಗಳಿಂದಲೇ ನನಗೆ ಪ್ರಿಯನಾದ ಭರತನು ಪಟ್ಟಾಭಿಷಿಕ್ತನಾಗಲಿ. ಮತ್ತೊಂದು ವರದಿಂದ ನೀನು ಈಗಲೆ ತಂದೆಯ ಅಪ್ಪಣೆಯಂತೆ ಹದಿನಾಲ್ಕುವರ್ಷಗಳ ಕಾಲ ಕಾಡಿಗೆ ಹೊರಡುವವನಾಗು. ಅಲ್ಲಿ ಮುನಿಗಳಿಗೆ ಆಹಾರವಾಗಿರುವ (ಗೆಡ್ಡೆಗೆಣಸುಗಳನ್ನು ತಿಂದುಕೊಂಡು) ವಾಸಮಾಡುವವನಾಗು. ಇದೇ ನಿನ್ನ ತಂದೆಯು ನಿನಗೆ ವಿಧಿಸಿರುವ ಕರ್ತವ್ಯವು. ಇದನ್ನು ನೀನು ಮಾಡಬೇಕು. ರಘುನಂದನನೆ, ರಾಜನಾದರೊ, ಬಾಯಿಬಿಟ್ಟು ಹೀಗೆ ಹೇಳಲು ನಾಚಿಕೊಳ್ಳುತ್ತಿರುವನು.

ಶ್ರೀರಾಮ ಉವಾಚ—

ಭರತಸ್ಯೈವ ರಾಜ್ಯಂ ಸ್ಯಾದಹಂ ಗಚ್ಛಾಮಿ ದಂಡಕಾನ್ ।
ಕಿಂ ತು ರಾಜಾ ನ ವಕ್ತೀಹ ಮಾಂ ನ ಜಾನೇಽತ್ರ ಕಾರಣಮ್ ॥ ೬೪ ॥

ಶ್ರುತ್ವೈತದ್ರಾಮಭಾಷಿತಂ ದೃಷ್ಟ್ವಾ ರಾಮಂ ಪುರಃ ಸ್ಥಿತಮ್ ।
ಪ್ರಾಹ ರಾಜಾ ದಶರಥಃ ದುಃಖಿತೋ ದುಃಖಿತಂ ವಚಃ ॥ ೬೫ ॥
ಸ್ತ್ರೀಜಿತಂ ಭ್ರಾಂತಹೃದಯಮುನ್ಮಾರ್ಗಪರಿವರ್ತಿನಮ್ ।
ನಿಗೃಹ್ಯ ಮಾಂ ಗೃಹಾಣೇದಂ ರಾಜ್ಯಂ ಪಾಪಂ ನ ತದ್ಭವೇತ್ ॥ ೬೬ ॥
ಏವಂ ಚೇದನೃತಂ ನೈವ ಮಾಂ ಸ್ಪೃಶೇದ್ರಘುನಂದನ ।
ಇತ್ಯುಕ್ತ್ವಾ ದುಃಖಸಂತಪ್ತೋ ವಿಲಲಾಪ ನೃಪಸ್ತದಾ ॥ ೬೭ ॥

೬೪-೬೭. ಶ್ರೀರಾಮನಿಂತೆಂದನು : 'ರಾಜ್ಯವು ಭರತನಿಗೇ ಆಗಲಿ; ನಾನು ದಂಡಕಾರಣ್ಯಕ್ಕೆ ಹೋಗುವೆನು. ಆದರೆ ರಾಜನು ನನ್ನನ್ನು ಕುರಿತು ಹಾಗೆ ಹೇಳದೆ ಇರಲು ಕಾರಣವೇನೋ ತಿಳಿಯದಾಗಿದೆ.'–ಎನ್ನಲು ರಾಮನ ಈ ಮಾತನ್ನು ಕೇಳಿ ಎದುರಿಗೇ ಇದ್ದ ಅವನನ್ನು ಕುರಿತು ರಾಜನಾದ ದಶರಥನು ಬಹಳ ದುಃಖದಿಂದ ಈ ರೀತಿ ಹೇಳಿದನು. "ಹೆಂಗಸಿಗೆ ಸೋತವನಾಗಿಯೂ ಬುದ್ಧಿಭ್ರಮಣೆಯಾಗಿರುವವನೂ ಅಡ್ಡದಾರಿಯನ್ನು ತುಳಿಯುತ್ತಿರುವವನೂ ಆಗಿರುವ ನನ್ನನ್ನು ಶಿಕ್ಷಿಸಿ ಈ ರಾಜ್ಯವನ್ನು ನೀನು ಸ್ವೀಕರಿಸು. ಅದೆಂದಿಗೂ ಪಾಪವಾಗಲಾರದು. ಹೀಗಾದರೆ ಎಲೈ ರಘುನಂದನನೆ, ಅಸತ್ಯವೂ ನನ್ನನ್ನು ಮುಟ್ಟುವದಿಲ್ಲ." ಹೀಗೆಂದು ಹೇಳಿ ದುಃಖದಿಂದ ಪೀಡಿತನಾದ ರಾಜನು ಅಳುತ್ತಿದ್ದನು.

ಹಾ ರಾಮ ಹಾ ಜಗನ್ನಾಥ ಹಾ ಮಮ ಪ್ರಾಣವಲ್ಲಭ ।
ಮಾಂ ವಿಸೃಜ್ಯ ಕಥಂ ಘೋರಂ ವಿಪಿನಂ ಗಂತುಮರ್ಹಸಿ ॥ ೬೮ ॥
ಇತಿ ರಾಮಂ ಸಮಾಲಿಂಗ್ಯ ಮುಕ್ತಕಂಠೋ ರುರೋದ ಹ ।
ವಿಮೃಜ್ಯ ನಯನೇ ರಾಮಃ ಪಿತುಃ ಸಜಲಪಾಣಿನಾ ॥ ೬೯ ॥
ಆಶ್ವಾಸಯಾಮಾಸ ನೃಪಂ ಶನೈಃ ಸ ನಯಕೋವಿದಃ ॥

೬೮-೬೯. 'ಎಲೈ ರಾಮನೆ, ಜಗನ್ನಾಥನೆ, ನನ್ನ ಪ್ರಾಣಗಳೊಡೆಯನೆ, ನನ್ನನ್ನು ಬಿಟ್ಟು ಭಯಂಕರವಾದ ಕಾಡಿಗೆ ನೀನೊಬ್ಬನೇ ಹೇಗೆ ಹೋಗುವೆ ?' ಹೀಗೆನ್ನುತ್ತಾ ರಾಮನನ್ನು ಅಪ್ಪಿಕೊಂಡು ಗಟ್ಟಿಯಾಗಿ ಅತ್ತನು. ಜಾಣನಾದ ರಾಮನು ಒದ್ದೆಯಾದ ಕೈಯಿಂದ ತಂದೆಯ ಕಣ್ಣುಗಳೆರಡನ್ನೂ ಒರಸುತ್ತಾ ಮೆಲ್ಲನೆ ರಾಜನನ್ನು ಸಮಾಧಾನಮಾಡುತ್ತಿದ್ದನು.

ಕಿಮತ್ರ ದುಃಖೇನ ವಿಭೋ ರಾಜ್ಯಂ ಶಾಸತು ಮೇಽನುಜಃ ।
ಅಹಂ ಪ್ರತಿಜ್ಞಾಂ ನಿಸ್ತೀರ್ಯ ಪುನರ್ಯಾಸ್ಯಾಮಿ ತೇ ಪುರಮ್ ॥೭೦॥
ರಾಜ್ಯಾತ್ ಕೋಟಿಗುಣಂ ಸೌಖ್ಯಂ ಮಮ ರಾಜನ್ ವನೇ ಸತಃ ।
ತ್ವತ್ಸತ್ಯಪಾಲನಂ ದೇವಕಾರ್ಯಂ ಚಾಪಿ ಭವಿಷ್ಯತಿ ॥ ೭೧ ॥
ಕೈಕೇಯ್ಯಾಶ್ಚ ಪ್ರಿಯೋ ರಾಜನ್ ವನವಾಸೋ ಮಹಾಗುರುಃ ।

೭೦-೭೧. "ಎಲೈ ಪ್ರಭುವೆ, ಇದರಲ್ಲಿ ದುಃಖಕರವಾದುದಾದರೂ ಏನಿದ್ದೀತು ? ನನ್ನ ತಮ್ಮನು ರಾಜ್ಯಭಾರವನ್ನು ಮಾಡಲಿ! ನಾನು ಪ್ರತಿಜ್ಞೆಯನ್ನು ಪೂರೈಸಿ ನಿನ್ನ ಪಟ್ಟಣಕ್ಕೆ ಹಿಂದಿರುಗುವೆನು. ವನದಲ್ಲಿರುವ ನನಗೆ ರಾಜ್ಯಕ್ಕಿಂತಲೂ ಕೋಟಿಯಷ್ಟು ಹೆಚ್ಚಿನ ಸೌಖ್ಯವು ದೊರಕಲಿದೆ. ನಿನ್ನ ಸತ್ಯವಾದ ಮಾತನ್ನು ಪರಿಪಾಲಿಸುವದು, ದೇವತೆಗಳ ಕಾರ್ಯವನ್ನು ನೆರವೇರಿಸುವದು-ಎರಡೂ ಆಗಲಿದೆ. ಮತ್ತು ಕೈಕೇಯಿಗೂ ಪ್ರಿಯವಾಗಿರುವ ನನ್ನ ಈ ವನವಾಸವು ಹೆಚ್ಚು ಪೂಜ್ಯವಾದದ್ದಾಗಿದೆ."

ಇದಾನೀಂ ಗಂತುಮಿಚ್ಛಾಮಿ ವ್ಯೇತು ಮಾತುಶ್ಚ ಹೃಜ್ಜ್ವರಃ ।
ಸಂಭಾರಾಶ್ಚೋಪಸಂಹ್ರಿಯಂತಾಮಭಿಷೇಕಾರ್ಥಮಾಹೃತಾಃ ॥ ೭೨ ॥

ಮಾತರಂ ಚ ಸಮಾಶ್ವಾಸ್ಯ ಅನುನೀಯ ಚ ಜಾನಕೀಮ್ ।
ಆಗತ್ಯ ಪಾದೌ ವಂದಿತ್ವಾ ತವ ಯಾಸ್ಯೇ ಸುಖಂ ವನಮ್ ॥ ೭೩ ॥

ಇತ್ಯುಕ್ತ್ವಾ ತು ಪರಿಕ್ರಮ್ಯ ಮಾತರಂ ದ್ರಷ್ಟುಮಾಯಯೌ ॥

೭೨-೭೩. ಈಗ ನಾನು (ಕಾಡಿಗೆ) ಹೊರಡಲು ಇಷ್ಟಪಡುತ್ತೇನೆ. ತಾಯಿಯಾದ ಕೈಕೇಯಿಯ ಮನೋವ್ಯಥೆಯು ಪರಿಹಾರವಾಗಲಿ; ಅಭಿಷೇಕಕ್ಕಾಗಿ ತಂದಿರುವ ಎಲ್ಲಾ ಪದಾರ್ಥಗಳೂ ಇಲ್ಲಿಗೆ ಬರಲಿ; ನಾನು ತಾಯಿಯಾದ (ಕೌಸಲ್ಯೆ) ಯನ್ನೂ (ಹೆಂಡತಿ) ಯಾದ ಸೀತೆಯನ್ನೂ ಸಮಾಧಾನಗೊಳಿಸಿ ಮತ್ತೆ ಇಲ್ಲಿಗೆ ಬಂದು ನಿನ್ನ ಪಾದಗಳಿಗೆ ನಮಸ್ಕರಿಸಿ ಸುಖವಾಗಿ ಕಾಡಿಗೆ ಹೋಗುವೆನು. ಹೀಗೆಂದು ಹೇಳಿ ತಾಯಿಯನ್ನು ನೋಡುವದಕ್ಕಾಗಿ ಹೊರಟನು.

ಕೌಸಲ್ಯಾಪಿ ಹರೇಃ ಪೂಜಾಂ ಕುರುತೇ ರಾಮಕಾರಣಾತ್ ।
ಹೋಮಂ ಚ ಕಾರಯಾಮಾಸ ಬ್ರಾಹ್ಮಣೇಭ್ಯೋ ದದೌ ಧನಮ್ ॥
ಧ್ಯಾಯತೇ ವಿಷ್ಣುಮೇಕಾಗ್ರಮನಸಾ ಮೌನಮಾಸ್ಥಿತಾ ।

ಅಂತಸ್ಥಮೇಕಂ ಘನಚಿತ್ಪ್ರಕಾಶಂ
ನಿರಸ್ತಸರ್ವಾತಿಶಯಸ್ವರೂಪಮ್ ।
ವಿಷ್ಣುಂ ಸದಾನಂದಮಯಂ ಹೃದಬ್ಜೇ
ಸಾ ಭಾವಯಂತೀ ನ ದದರ್ಶ ರಾಮಮ್ ॥ ೭೫ ॥

೭೪-೭೫. ಕೌಸಲ್ಯೆಯು ಕೂಡ ವಿಷ್ಣುಪೂಜೆಯನ್ನು ಶ್ರೀರಾಮನಿಗೆ ಒಳ್ಳೆಯದಾಗಲೆಂಬ ಕಾರಣದಿಂದ ಮಾಡುತ್ತಿದ್ದಳು. ಬ್ರಾಹ್ಮಣರಿಂದ ಹೋಮಗಳನ್ನು ಮಾಡಿಸಿ ಧನವನ್ನು ದಾನಮಾಡಿದಳು. ಮೌನದಿಂದಲೂ ಏಕಾಗ್ರಮನಸ್ಸಿನಿಂದಲೂ ವಿಷ್ಣುವನ್ನು ಧ್ಯಾನಮಾಡುತ್ತಿದ್ದಳು. ಎಲ್ಲರ ಹೃದಯದೊಳ

ಗಿರುವವನೂ ಚಿತ್ಪ್ರಕಾಶಸ್ವರೂಪನೂ ಎಲ್ಲಾ ವಸ್ತುಗಳನ್ನೂ ಮೀರಿದ ಹೆಚ್ಚಿನ ಸ್ವರೂಪನೂ ಸದಾನಂದಮಯನೂ ಆದ ವಿಷ್ಣುವನ್ನು ಹೃದಯಕಮಲದಲ್ಲಿ ಆಕೆಯು ಚಿಂತಿಸುತ್ತಾ ಇದ್ದಳಾದ್ದರಿಂದ ರಾಮನು ಬಂದದ್ದನ್ನು ನೋಡಲಿಲ್ಲ.

ಇತಿ ಶ್ರೀಮದಧ್ಯಾತ್ಮರಾಮಾಯಣೇ ಅಯೋಧ್ಯಾಕಾಂಡೇ
ತೃತೀಯಃ ಸರ್ಗಃ

---

## ನಾಲ್ಕನೆಯ ಸರ್ಗ

**ಶ್ರೀ ಮಹಾದೇವ ಉವಾಚ—**

ತತಃ ಸುಮಿತ್ರಾ ದೃಷ್ಟ್ವೈನಂ ರಾಮಂ ರಾಜ್ಞೀಂ ಸಸಂಭ್ರಮಾ ।
ಕೌಸಲ್ಯಾಂ ಬೋಧಯಾಮಾಸ ರಾಮೋಽಯಂ ಸಮುಪಸ್ಥಿತಃ ॥ ೧ ॥
ಶ್ರುತ್ವೈವ ರಾಮನಾಮೈಷಾ ಬಹಿರ್ದೃಷ್ಟಿಪ್ರವಾಹಿತಾ ।
ರಾಮಂ ದೃಷ್ಟ್ವಾ ವಿಶಾಲಾಕ್ಷಮಾಲಿಂಗ್ಯಾಂಕೇ ನ್ಯವೇಶಯತ್ ॥ ೨ ॥
ಮೂರ್ಧ್ನ್ಯವಘ್ರಾಯ ಪಸ್ಪರ್ಶ ಗಾತ್ರಂ ನೀಲೋತ್ಪಲಚ್ಛವಿ ।
ಭುಂಕ್ಷ್ವ ಪುತ್ರೇತಿ ಚ ಪ್ರಾಹ ಮಿಷ್ಟಮನ್ನಂ ಕ್ಷುಧಾರ್ದಿತಃ ॥ ೩ ॥

೧-೩. ಶ್ರೀಮಹಾದೇವನಿಂತೆಂದನು : ಸುಮಿತ್ರೆಯಾದರೊ, ರಾಮನು ಬಂದದ್ದನ್ನು ನೋಡಿ ಸಂಭ್ರಮದಿಂದ ಕೂಡಿ ರಾಣಿಯಾದ ಕೌಸಲ್ಯೆಯನ್ನು 'ರಾಮನು ಬಂದಿದ್ದಾನೆ' ಎಂದು ಎಚ್ಚರಿಸಿದಳು. ರಾಮನೆಂಬ ಹೆಸರನ್ನು ಕೇಳಿದೊಡನೆಯೇ ಬಹಿರ್ಮುಖಳಾದ ಆಕೆಯು ವಿಶಾಲವಾದ ಕಣ್ಣುಗಳುಳ್ಳ ರಾಮನನ್ನು ನೋಡಿ ತಬ್ಬಿಕೊಂಡು ತೊಡೆಯಮೇಲೆ ಕುಳ್ಳಿರಿಸಿಕೊಂಡಳು. ಮತ್ತು ತಲೆಯನ್ನು ಮೂಸಿನೋಡಿ ಕನ್ನೈದಿಲೆಯ ಬಣ್ಣದ ಅವನ ಮೈಯನ್ನು ತಡವಿ 'ಮಗು, ಹಸಿದಿರುವ ನೀನು ಇದೊ, ಮೃಷ್ಟಾನ್ನವನ್ನು ಊಟಮಾಡು' ಎಂದಳು.

ರಾಮಃ ಪ್ರಾಹ ನ ಮೇ ಮಾತರ್ಭೋಜನಾವಸರಃ ಕುತಃ ।
ದಂಡಕಾಗಮನೇ ಶೀಘ್ರಂ ಮಮ ಕಾಲೋಽದ್ಯ ನಿಶ್ಚಿತಃ ॥ ೪ ॥
ಕೈಕೇಯೀವರದಾನೇನ ಸತ್ಯಸಂಧಃ ಪಿತಾ ಮಮ ।
ಭರತಾಯ ದದೌ ರಾಜ್ಯಂ ಮಮಾಪ್ಯಾರಣ್ಯಮುತ್ತಮಮ್ ॥ ೫ ॥
ಚತುರ್ದಶ ಸಮಾಸ್ತತ್ರ ಹ್ಯುಷಿತ್ವಾ ಮುನಿವೇಷಧೃಕ್ ।
ಆಗಮಿಷ್ಯೇ ಪುನಃ ಶೀಘ್ರಂ ನ ಚಿಂತಾಂ ಕರ್ತುಮರ್ಹಸಿ ॥ ೬ ॥

೪-೬. ರಾಮನಿಂತೆಂದನು : 'ತಾಯೆ, ನನಗೆ ಈಗ ಊಟಮಾಡಲು ಅವಕಾಶವಿಲ್ಲ. ಜಾಗ್ರತೆಯಾಗಿ ದಂಡಕಾರಣ್ಯಕ್ಕೆ ಹೋಗಲು ನನ್ನ ಸಮಯವು

ನಿಶ್ಚಯವಾಗಿದೆ. ಸತ್ಯಸಂಧನಾದ ನನ್ನ ತಂದೆಯು ಕೈಕೇಯಿಗೆ ಕೊಟ್ಟಿದ್ದ ವರಗಳ ಪ್ರಕಾರ ಭರತನಿಗೆ ರಾಜ್ಯವನ್ನೂ ನನಗೆ ಅರಣ್ಯವಾಸವನ್ನೂ ಅನುಗ್ರಹಿಸಿರುತ್ತಾನೆ. ಅಲ್ಲಿ ನಾನು ಹದಿನಾಲ್ಕುವರ್ಷಗಳ ಕಾಲ ಋಷಿಗಳ ವೇಷದಿಂದ ವಾಸಮಾಡಿಕೊಂಡಿದ್ದು ಮತ್ತೆ ಬೇಗನೆ ಹಿಂದಿರುಗಿ ಬರುವೆನು. ನೀನೇನೂ ಚಿಂತಿಸಬೇಡ.'

ತಚ್ಛ್ರುತ್ವಾ ಸಹಸೋದ್ವಿಗ್ನಾ ಮೂರ್ಛಿತಾ ಪುನರುತ್ಥಿತಾ ।
ಆಹ ರಾಮಂ ಸುದುಃಖಾರ್ತಾ ದುಃಖಸಾಗರಸಂಪ್ಲುತಾ ॥ ೭ ॥
ಯದಿ ರಾಮ ವನಂ ಸತ್ಯಂ ಯಾಸಿ ಚೇನ್ನಯ ಮಾಮಪಿ ।
ತ್ವದ್ವಿಹೀನಾ ಕ್ಷಣಾರ್ಧಂ ವಾ ಜೀವಿತಂ ಧಾರಯೇ ಕಥಮ್ ॥ ೮ ॥
ಯಥಾ ಗೌರ್ಬಾಲಕಂ ವತ್ಸಂ ತ್ಯಕ್ತ್ವಾ ತಿಷ್ಠೇನ್ನ ಕುತ್ರಚಿತ್ ।
ತಥೈವ ತ್ವಾಂ ನ ಶಕ್ನೋಮಿ ತ್ಯಕ್ತುಂ ಪ್ರಾಣಾತ್ ಪ್ರಿಯಂ ಸುತಮ್ ॥
ಭರತಾಯ ಪ್ರಸನ್ನಶ್ಚೇದ್ರಾಜ್ಯಂ ರಾಜಾ ಪ್ರಯಚ್ಛತು ।
ಕಿಮರ್ಥಂ ವನವಾಸಾಯ ತ್ವಾಮಾಜ್ಞಾಪಯತಿ ಪ್ರಿಯಮ್ ॥ ೧೦ ॥

೭-೧೦. ಆ ಮಾತನ್ನು ಕೇಳಿ ಕೂಡಲೆ ತಳಮಳಗೊಂಡವಳಾದ ಆಕೆಯು ಮೂರ್ಛೆಹೋದವಳಾದಳು. ಮತ್ತೆ ಮೇಲೆದ್ದು ರಾಮನನ್ನು ಕುರಿತು ದುಃಖದಿಂದ ಬಳಲಿದವಳಾಗಿ ಹಾಗೂ ಶೋಕಸಮುದ್ರದಲ್ಲಿ ಮುಳುಗಿದವಳಾಗಿ 'ಎಲೈ ರಾಮನೆ, ನೀನು ನಿಜವಾಗಿಯೂ ಕಾಡಿಗೆ ಹೋಗುವದಾದರೆ ನನ್ನನ್ನೂ ಕರೆದುಕೊಂಡು ಹೋಗು. ನೀನಿಲ್ಲದೆ ಅರ್ಧಕ್ಷಣ ಕಾಲವೂ ನಾನು ಬದುಕಿರಲಾರೆನು. ಪ್ರಾಣಕ್ಕಿಂತಲೂ ಪ್ರಿಯನಾದ ಮಗನಾದ ನಿನ್ನನ್ನು-ಹೇಗೆ ತಾಯಿ ಹಸುವು ತನ್ನ ಚಿಕ್ಕ ಕರುವನ್ನು ಬಿಟ್ಟಿರಲಾರದೋ ಹಾಗೆ- ಬಿಟ್ಟಿರಲಾರೆನು. ರಾಜನು ಸಂತೋಷಗೊಂಡು ಭರತನಿಗೆ ರಾಜ್ಯವನ್ನು ಕೊಡುವದಾದರೆ ಕೊಟ್ಟುಕೊಳ್ಳಲಿ. ನನಗೆ ಪ್ರಿಯನಾದ ನಿನ್ನನ್ನು ವನವಾಸಕ್ಕೇಕೆ ಕಳುಹಿಸಬೇಕು ?

ಕೈಕೇಯ್ಯಾ ವರದೋ ರಾಜಾ ಸರ್ವಸ್ವಂ ವಾ ಪ್ರಯಚ್ಛತು ।
ತ್ವಯಾ ಕಿಮಪರಾದ್ಧಂ ಹಿ ಕೈಕೇಯ್ಯಾ ವಾ ನೃಪಸ್ಯ ವಾ ॥ ೧೧ ॥
ಪಿತಾ ಗುರುರ್ಯಥಾ ರಾಮ ತವಾಹಮಧಿಕಾ ತತಃ ।
ಪಿತ್ರಾಜ್ಞಪ್ತೋ ವನಂ ಗಂತುಂ ವಾರಯೇಯಮಹಂ ಸುತಮ್ ॥೧೨॥
ಯದಿ ಗಚ್ಛಸಿ ಮದ್ವಾಕ್ಯಮುಲ್ಲಂಘ್ಯ ನೃಪವಾಕ್ಯತಃ ।
ತದಾ ಪ್ರಾಣಾನ್ ಪರಿತ್ಯಜ್ಯ ಗಚ್ಛಾಮಿ ಯಮಸಾದನಮ್ ॥ ೧೩ ॥

೧೧-೧೩. 'ರಾಜನು ಕೈಕೇಯಿಗೆ ವರವನ್ನು ಕೊಟ್ಟಿರುವನಾದರೆ ಎಲ್ಲವನ್ನೂ ಆಕೆಗೇ ಕೊಡಲಿ! ಆದರೆ ರಾಜನಿಗಾಗಲಿ, ಕೈಕೇಯಿಗಾಗಲಿ-ನೀನು

ಮಾಡಿರುವ ಅಪರಾಧವಾದರೂ ಏನು ? ಎಲೈ ರಾಮನೆ, ನಿನಗೆ ತಂದೆಯು ಹೇಗೆ ಪೂಜ್ಯನೋ ಅದಕ್ಕಿಂತ ಹೆಚ್ಚಾಗಿ ನಾನು ಪೂಜ್ಯಳು. ತಂದೆಯಿಂದ ಅಪ್ಪಣೆ ಯನ್ನು ಪಡೆದು ಕಾಡಿಗೆ ಹೋಗಲಿರುವೆಯಾದರೆ ನಾನು ಅದನ್ನು ತಡೆಯುತ್ತೇನೆ. ಆದರೆ ನನ್ನ ಮಾತನ್ನು ಮೀರಿ ರಾಜನ ಮಾತಿನಂತೆಯೇ ನೀನು ಕಾಡಿಗೇ ಹೋಗುವೆಯಾದರೆ ಆಗ ನಾನು ಪ್ರಾಣಗಳನ್ನು ಕಳೆದುಕೊಂಡು ಯಮನ ನಗರಿಗೆ ಹೋಗುವೆನು.

ಲಕ್ಷ್ಮಣೋऽಪಿ ತತಃ ಶ್ರುತ್ವಾ ಕೌಸಲ್ಯಾವಚನಂ ರುಷಾ ।
ಉವಾಚ ರಾಘವಂ ವೀಕ್ಷ್ಯ ದಹನ್ನಿವ ಜಗತ್ತ್ರಯಮ್ ॥ ೧೪ ॥
ಉನ್ಮತ್ತಂ ಭ್ರಾಂತಮನಸಂ ಕೈಕೇಯೀವಶವರ್ತಿನಮ್ ।
ಬದ್ಧ್ವಾ ನಿಹನ್ಮಿ ಭರತಂ ತದ್ಬಂಧೂನ್ ಮಾತುಲಾನಪಿ ॥ ೧೫ ॥
ಅದ್ಯ ಪಶ್ಯಂತು ಮೇ ಶೌರ್ಯಂ ಲೋಕಾನ್ ಪ್ರದಹತಃ ಪುರಾ ।
ರಾಮ ತ್ವಮಭಿಷೇಕಾಯ ಕುರು ಯತ್ನಮರಿಂದಮ ॥ ೧೬ ॥
ಧನುಷ್ಪಾಣಿರಹಂ ತತ್ರ ನಿಹನ್ಯಾಂ ವಿಘ್ನಕಾರಿಣಃ ॥

೧೪-೧೬. ಅನಂತರ ಲಕ್ಷ್ಮಣನೂ ಕೌಸಲ್ಯೆಯ ಮಾತನ್ನು ಕೇಳಿ ರಾಮ ನನ್ನು ಕುರಿತು ಮೂರು ಲೋಕಗಳನ್ನೂ ಸು ಡು ವ ವ ನಂ ತೆ ಕೋಪದಿಂದ ಹೀಗೆಂದನು : 'ರಾಮನೆ, ಹುಚ್ಚನಾಗಿಯೂ ಬುದ್ಧಿಗೆಟ್ಟವನಾಗಿಯೂ ಕೈಕೇಯಿ ಯ ಅಧೀನನಾಗಿಯೂ ಇರುವ (ತಂದೆಯನ್ನೂ) ಭರತನನ್ನೂ ಅವನ ಬಂಧು ಗಳಾದ ಸೋದರಮಾವಂದಿರನ್ನೂ ಕಟ್ಟಿಹಾಕಿ ನಾಶಮಾಡಿಬಿಡುವೆನು. ಈಗ ಲೋಕಗಳನ್ನೆಲ್ಲ ಸುಟ್ಟುಬಿಡುವ (ಕಾಲನಂತಿರುವ) ನನ್ನ ಪೌರುಷವನ್ನು ಎಲ್ಲರೂ ಕಂಡುಕೊಳ್ಳಲಿ. ನೀನು ಪಟ್ಟಾಭಿಷೇಕಕ್ಕಾಗಿ ಪ್ರಯತ್ನಮಾಡು. ಅದಕ್ಕೆ ಅಡ್ಡಿಮಾಡುವವರನ್ನು ಧನುರ್ಧಾರಿಯಾದ ನಾನು ನಾಶಮಾಡುವೆನು.

ಇತಿ ಬ್ರುವಂತಂ ಸೌಮಿತ್ರಿಮಾಲಿಂಗ್ಯ ರಘುನಂದನಃ ।
ಶೂರೋऽಸಿ ರಘುಶಾರ್ದೂಲ ಮಮಾತ್ಯಂತಹಿತೇ ರತಃ ॥ ೧೭ ॥
ಜಾನಾಮಿ ಸರ್ವಂ ತೇ ಸತ್ಯಂ ಕಿಂ ತು ತತ್ಸಮಯೋ ನ ಹಿ ।

೧೭. ಹೀಗೆ ಹೇಳುತ್ತಿರುವ ಲಕ್ಷ್ಮಣನನ್ನು ಬಾಚಿ ತಬ್ಬಿಕೊಂಡು ರಘು ನಂದನನಾದ ರಾಮನು 'ಎಲೈ ರಘುಶ್ರೇಷ್ಠನೆ, ನೀನು ಶೂರನೆಂಬುದು ಸರಿ, ನನ್ನ ಹಿತದಲ್ಲಿಯೇ ನೀನು ನಿರತನಾಗಿರುವೆ. ಎಲ್ಲವನ್ನೂ ಬಲ್ಲೆನು. ಆದರೆ ಅದಕ್ಕೆ ಈಗ ಕಾಲವಲ್ಲ.

ಯದಿದಂ ದೃಶ್ಯತೇ ಸರ್ವಂ ರಾಜ್ಯಂ ದೇಹಾದಿಕಂ ಚ ಯತ್ ।
ಯದಿ ಸತ್ಯಂ ಭವೇತ್ತತ್ರ ಆಯಾಸಃ ಸಫಲಶ್ಚ ತೇ ॥ ೧೮ ॥

ಭೋಗಾ ಮೇಘವಿತಾನಸ್ಥವಿದ್ಯುಲ್ಲೇಖೇವ ಚಂಚಲಾಃ ।
ಆಯುರಪ್ಯಗ್ನಿಸಂತಪ್ತಲೋಹಸ್ಥಜಲಬಿಂದುವತ್ ॥ ೧೯ ॥

ಯಥಾ ವ್ಯಾಲಗಲಸ್ಥೋಽಪಿ ಭೇಕೋ ದಂಶಾನಪೇಕ್ಷತೇ ।
ತಥಾ ಕಾಲಾಹಿನಾ ಗ್ರಸ್ತೋ ಲೋಕೋ ಭೋಗಾನಶಾಶ್ವತಾನ್ ॥ ೨೦ ॥

೧೯-೨೦. ಈ ರಾಜ್ಯವು, ಶರೀರಾದಿಗಳೇ ಮುಂತಾಗಿ ಏನೇನು ಕಂಡು ಬರುತ್ತಿವೆಯೋ ಅವು ನಿಜವಾಗಿದ್ದಿದ್ದರೆ ನಿನ್ನ ಶ್ರಮವು ಸಾರ್ಥಕವಾಗುತ್ತಿತ್ತು. (ಆದರೆ) ಭೋಗಗಳಾದರೋ ಹರಡಿರುವ ಮೋಡಗಳ ನಡುವೆ ತೋರಿಬರುವ ಮಿಂಚಿನಬಳ್ಳಿಯಂತೆ ಅನಿತ್ಯವಾಗಿವೆ. ಆಯುಷ್ಯವಾದರೊ, ಬೆಂಕಿಯಿಂದ ಕಾಯಿಸಲ್ಪಟ್ಟ ಕಬ್ಬಿಣದ ಮೇಲಿರುವ ನೀರಿನ ಹನಿಯಂತೆ ಅಲ್ಪಕಾಲದ್ದಾಗಿದೆ. ಹೇಗೆ ಹೆಬ್ಬಾವಿನ ಬಾಯಿಯಲ್ಲಿ ಸಿಕ್ಕಿಕೊಂಡಿದ್ದರೂ ಕಪ್ಪೆಯು ನೊಣಗಳನ್ನು ಬಯಸುವದೋ ಹಾಗೆ ಕಾಲನೆಂಬ ಮೃತ್ಯುವಿನಿಂದ ನುಂಗಲ್ಪಟ್ಟ ಪ್ರಪಂಚದ (ಜನರು) ಅಶಾಶ್ವತವಾದ ಭೋಗಗಳನ್ನು ಬಯಸುವವರಾಗಿರುತ್ತಾರೆ.

ಕರೋತಿ ದುಃಖೇನ ಹಿ ಕರ್ಮತಂತ್ರಂ
ಶರೀರಭೋಗಾರ್ಥಮಹರ್ನಿಶಂ ನರಃ ।
ದೇಹಸ್ತು ಭಿನ್ನಃ ಪುರುಷಾತ್ ಸಮೀಕ್ಷ್ಯತೇ
ಕೋ ವಾಽತ್ರ ಭೋಗಃ ಪುರುಷೇಣ ಭುಜ್ಯತೇ ॥ ೨೧ ॥

ಪಿತೃಮಾತೃಸುತಭ್ರಾತೃದಾರಬಂಧ್ವಾದಿಸಂಗಮಃ ।
ಪ್ರಪಾಯಾಮಿವ ಜಂತೂನಾಂ ನದ್ಯಾಂ ಕಾಷ್ಠೌಘವಚ್ಚಲಃ ॥ ೨೨ ॥

ಛಾಯೇವ ಲಕ್ಷ್ಮೀಃ ಚಪಲಾ ಪ್ರತೀತಾ
ತಾರುಣ್ಯಮಂಬೂರ್ಮಿವದಧ್ರುವಂ ಚ ।
ಸ್ವಪ್ನೋಪಮಂ ಸ್ತ್ರೀಸುಖಮಾಯುರಲ್ಪಂ
ತಥಾಪಿ ಜಂತೋರಭಿಮಾನ ಏಷಃ ॥ ೨೩ ॥

೨೧-೨೩. ಮನುಷ್ಯನು ಶರೀರಸುಖಕ್ಕಾಗಿ ಹಗಲೂ ರಾತ್ರಿಯೂ ಕರ್ಮ ವಶನಾಗಿ ಕಷ್ಟದಿಂದ ಕೆಲಸಮಾಡುತ್ತಾನೆ. ಆದರೆ ಪುರುಷನಿಗಿಂತ (ಆತ್ಮನಿಗಿಂತ) ದೇಹವು ಬೇರೆಯೇ ಆಗಿದೆ. ಹೀಗಿರುವಲ್ಲಿ ಪುರುಷನು ಯಾವ ಭೋಗವನ್ನು ತಾನೆ ತನಗಾಗಿ ಅನುಭವಿಸಿಯಾನು ? ತಂದೆ, ತಾಯಿ, ಮಗ, ಸೋದರ, ಹೆಂಡತಿ, ಬಂಧುಗಳೇ ಮುಂತಾದವರ ಸಂಬಂಧವು ಅರವಟ್ಟಿಗೆಗಳಲ್ಲಿ ಬಾಯಾರಿಕೆಯನ್ನು ತೀರಿಸಿಕೊಳ್ಳಲು ಒಟ್ಟುಗೂಡಿದ ಪ್ರಾಣಿಗಳಂತೆ ಅಥವಾ ಪ್ರವಾಹದಲ್ಲಿ ತೇಲಿಬಂದ ಮರದ ತುಂಡುಗಳಂತೆ ಕ್ಷಣಕಾಲ ಮಾತ್ರ ಒಡನಿದ್ದು ಅನಂತರ ಇಲ್ಲವಾಗುವದು. ಐಶ್ವರ್ಯವಾದರೋ, ನೆರಳಿನಂತೆ ಅಶಾಶ್ವತವಾಗಿರುವದು ;

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನ ಮಹಾಪೋಷಕರುಗಳು : ಶ್ರೀಯುತರುಗಳಾದ :-** M.P. No. 376 ಎಂ. ವಿ. ರಾಮಚಂದ್ರರವರು, ಬೆಂಗಳೂರು. 377. ಎಲ್.ವಿ. ಸವಣೂರ್‌ರವರು, ಪುಣೆ. 378. ಬಿ. ಟಿ. ದಂಡವತೆಯವರು, ಬಾಗಲಕೋಟೆ. 379. ಎಲ್. ವಿ. ದತ್ತಾತ್ರಿಯವರು, ಬೆಂಗಳೂರು. 380. ಎಸ್. ಜಿ. ಶೇಷಗಿರಿಯವರು, ಬೆಂಗಳೂರು. 381. ಎಸ್. ಎಸ್. ನೀಲವಾಣಿಯವರು, ಕಟಗೇರಿ. 382. ಎಸ್. ರಾಧಾಕೃಷ್ಣಶರ್ಮರು, ಬೆಂಗಳೂರು. 383. ದಾಮೋದರಕಿಣಿಯವರು, ಮಂಗಳೂರು. 384. ಎಸ್. ವಿ. ನರಸಿಂಹನ್‌ರವರು, ಬೆಂಗಳೂರು. 385. ಡಾ|| ವೇಣುಗೋಪಾಲರಾಯರು, ಚಿಕ್ಕಮಗಳೂರು. 386. ಶ್ರೀಮತಿ ಲಕ್ಷ್ಮಮ್ಮ ವೆಂಕಟಸ್ವಾಮಿಯವರು, ಅರಸೀಕೆರೆ. 387. ಬಿ ಆರ್. ಗುರುಮೂರ್ತಿಯವರು, ಬೊಂಬಾಯಿ—ಈ ಮಹಾಶಯರುಗಳು ರೂ. ೧೧೧ ರಂತೆ ಕೊಟ್ಟು ಮಹಾಪೋಷಕರಾಗಿ ಪತ್ರಿಕೆಯನ್ನು ಪ್ರೋತ್ಸಾಹಿಸಿದ್ದಾರೆ. ನಮ್ಮ ಅಭಿನಂದನೆಗಳು.

1979ನೆಯ ಆಗಸ್ಟ್ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :

**ಗುರುಮಂದಿರ ನಿಧಿಗೆ : ಶ್ರೀಗಳಾದ :-** ಯಾದಾಳಂ ವಂಶೀಕರು, ಬೆಂಗಳೂರು. ರೂ. ೧೦ ; ಬಿ. ಅಣ್ಣಾಜಿರಾಯರು, ದಾವಣಗೆರೆ ರೂ. ೪ ; ಹೆಚ್.ವಿ. ಶೇಷಗಿರಿರಾಯರು, ಬೆಂಗಳೂರು ರೂ. ೨ ; ಎಸ್. ಕೃಷ್ಣಸ್ವಾಮಿಯವರು, ಹೊಳೆನರಸೀಪುರ ರೂ. ೨. ಒಟ್ಟು ರೂ. ೧೮.

**ವಿದ್ಯಾರ್ಥಿನಿಧಿಗೆ :** ಯಾದಾಳಂ ವಂಶೀಕರು, ಬೆಂಗಳೂರು ರೂ. ೧೮.

**ಪೂಜಾಮಂದಿರ ನಿಧಿಗೆ :** ಶ್ರೀಗಳಾದ ಹೆಚ್. ಎಸ್. ಹುಲಿಮನಿಯವರು, ಗದಗ್ ಬೆಟಗೇರಿ ರೂ ೨ ; ಸುಂದರೇಶ್‌ರವರು, ಹೊಳೆನರಸೀಪುರ ರೂ. ೫ ; ಕೆ. ಎನ್. ಮುರಳೀಧರರವರು, ಕಲ್ಕತ್ತ ರೂ. ೫ ; ಒಟ್ಟು ರೂ. ೧೨.

**ಸಂನ್ಯಾಸಿಗಳ ಸತ್ಕಾರ ಖಾತೆಗೆ :** ಶ್ರೀಮತಿ ಕೆ. ವಿ. ಲಲಿತಾಂಬರವರು, ಮದ್ದೂರು, ರೂ. ೧೦ ; ಕೆ. ಎನ್. ಮುರಳೀಧರರವರು, ಕಲ್ಕತ್ತ ರೂ. ೮ ; ಒಟ್ಟು ರೂ. ೧೮.

ಮೇಲ್ಕಂಡ ಮಹಾಶಯರುಗಳಿಗೆಲ್ಲ ನಮ್ಮ ಕೃತಜ್ಞತಾಪೂರ್ವಕವಾದ ಅಭಿನಂದನೆಗಳನ್ನು ಈ ಮೂಲಕ ಸಮರ್ಪಿಸುತ್ತೇವೆ.

---

## ಬೆಂಗಳೂರಿನಲ್ಲಿ ನಮ್ಮ ಗ್ರಂಥಗಳು ದೊರೆಯುವ ಸ್ಥಳಗಳು

೧. ಅಧ್ಯಾತ್ಮಪ್ರಕಾಶ ಕಾರ್ಯಾಲಯ, ತ್ಯಾಗರಾಜನಗರ, ಬೆಂಗಳೂರು-28.

೨. ವೇದಾಂತ ಭವನ, ಉಮಾ ಚಿತ್ರಮಂದಿರದ ಹತ್ತಿರ, ಚಾಮರಾಜಪೇಟೆ, ಬೆಂಗಳೂರು-18.

೩. ಟಿ. ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್ಸ್, ಚಿಕ್ಕಪೇಟೆ, ಬೆಂಗಳೂರು-53.

೪. ಆರ್. ಎಂ. ರಾಧಾಕೃಷ್ಣರವರು, ಸುಬ್ರಹ್ಮಣ್ಯ ಎಂಟರ್‌ಪ್ರೈಸಸ್, ಮಾರ್ಕೆಟ್ ರೋಡ್, ವಿಶ್ವೇಶ್ವರಪುರ, ಬೆಂಗಳೂರು-4.

ADHYATMA-PRAKASHA Regd. No. KRN-I-5

Registered with the Registrar of News-papers for India under No. R. N. 13244/57

## ಕೇಳಿರಿ

ನೀವು ಪಾಪಿಗಳೆಂದೊ, ಪುಣ್ಯವಂತರೆಂದೋ ಮತ-ಧರ್ಮ-ನೀತಿಬೋಧಕರು ತಿಳಿಸುತ್ತಿದಾರೆ. ನಿಮಗೂ ಆ ಭಾವನೆಯು ಮನಸ್ಸಿನಲ್ಲಿ ಬೇರೂರಿರುವದು. ಆದರೆ ಉಪನಿಷತ್ತು ತಿಳಿಸುವಂತೆ ನೀವು ಪಾಪಿಗಳೂ ಅಲ್ಲ. ಪುಣ್ಯವಂತರೂ ಅಲ್ಲ; ನಿಮ್ಮ ಸ್ವರೂಪಕ್ಕೆ ಯಾವ ಧರ್ಮಾಧರ್ಮಗಳೂ ಅಂಟಿಕೊಂಡೇ ಇಲ್ಲ. ನೀವು ತಿಳಿದಿರುವ ತಿಳಿವಳಿಕೆಯೆಲ್ಲವೂ ಅವಿದ್ಯೆಯ ಕ್ಷೇತ್ರದೊಳಗೇ ಸೇರಿದೆ. ವಿದ್ಯಾದೃಷ್ಟಿಯಿಂದ ನೀವು ಕೇವಲ ಅಜರಾಮರವಾದ ಅದ್ವಿತೀಯ ಅಮೃತಾತ್ಮರೇ ಆಗಿರುತ್ತೀರಿ. ಹೀಗೆಂದು ಶ್ರುತಿಯು ಮೊಳಗುತ್ತಿರುವದು.

To.

Sri

Edited Printed & Published by H. S. Lakshminarasimha Murthy as Secretary for The Adhyatma Prakasha Karyalaya, At The Adhyatma Prakasha Press, Holenarsipur - 573211

6-10-1979.